## ಲೇಖಕರ ಮಾತು

ಕನ್ನಡ ಸಂಸ್ಕೃತಿಯಲ್ಲಿ 'ಜಾನಪದ'ದ ಆಯಾಮಗಳು ಹೆಚ್ಚು ಶಕ್ತಿಶಾಲಿಯಾಗಿದೆ. ಹಾಗೆ ನೋಡಿದರೆ ಕನ್ನಡ ಸಂಸ್ಕೃತಿಯ ಹೆಚ್ಚುಗಾರಿಕೆ ಇರುವುದೇ ಅದರ ಜಾನಪದ ಮುಖದಲ್ಲಿ. ಪ್ರಾಚೀನ ಕಾಲದಿಂದಲೂ ಕನ್ನಡ ಸಂಸ್ಕೃತಿಯ ಮೇಲೆ ಪರರ ದಾಳಿಯಾದಾಗಲೆಲ್ಲ ಅದರಿಂದ ತಪ್ಪಿಸಿಕೊಳ್ಳಲು ಹೆಚ್ಚು ಸಹಾಯಕವಾಗಿರುವುದೂ ಇದೇ ಆಯಾಮಗಳೆ. ದುರಾದೃಷ್ಟವೆಂದರೆ ಸಂಸ್ಕೃತಿಯ ಇಂಥ ಮೌಲ್ಯಯುತ ಭಾಗ ಆಧುನಿಕ ತಿಳುವಳಿಕೆಯ ಪರಿಣಾಮ ಹಿನ್ನೆಲೆಗೆ ಸರಿದಿದೆ. ಅಷ್ಟೇ ಅಲ್ಲ ಆ ಭಾಗ ಅವಮಾನದ, ಕೀಳಾದ ಭಾಗ ಎನಿಸಿತು. ಇಂಥ ಬೆಳವಣಿಗೆಯ ದುಷ್ಪರಿಣಾಮಗಳನ್ನು ನಾವೆಲ್ಲಜ ಸ್ಪಷ್ಟವಾಗಿ ಕಾಣುತ್ತಿದ್ದೇವೆ. ಸಂಸ್ಕೃತಿಯ ಯಾವ ಭಾಗವನ್ನು ನಾವು ಅತ್ಯಂತ ಜತನದಿಂದ ಕಾಪಿಡುತ್ತಾ ನಮ್ಮ ಬದಲಾದ ಬದುಕಿಗೆ ಅನುಗುಣವಾಗಿ ಮರು ರೂಪಿಸಿಕೊಳ್ಳುತ್ತಾ ಸಾಗಬೇಕಿತ್ತೋ ಅದು ನಮ್ಮಿಂದ ಸಾಧ್ಯವಾಗಲಿಲ್ಲ. ಇದರ ಪರಿಣಾಮ ನಮ್ಮ ಕನ್ನಡ ಸಂಸ್ಕೃತಿ ವಿನಾಶದ ದಿಕ್ಕಿಗೆ ನಡೆಯುತ್ತಿದೆಯೇನೋ ಎಂಬ ಭಾವನೆಯನ್ನುಂಟುಮಾಡಿತು. ಸಂಸ್ಕೃತಿಯ ಒಳಗಿನ ಜನರಿಗೆ ತಮ್ಮ ಅಸ್ತಿತ್ವವೆಲ್ಲಿದೆ? ಎಂಬ ದೊಡ್ಡ ಪ್ರಶ್ನೆ ಇಂದು ಕಾಡುತ್ತಿದೆ. ಇದರಿಂದಾಗಿ ವಿದ್ವತ್ ವಲಯವನ್ನಷ್ಟೇ ಅಲ್ಲ ಸಾಮಾನ್ಯ ಜನರು ಕೂಡ ತಮ್ಮ ಮೂಲ ಅಸ್ತಿತ್ವವನ್ನು ತಡಕಾಡ ತೊಡಗಿದ್ದಾರೆ. ಪರಂಪರೆಯ ಜೀವನ ಮೌಲ್ಯಗಳು ಪ್ರಸ್ತುತ ಸಂದರ್ಭಕ್ಕೆ ಅತ್ಯಂತ ಅನಿವಾರ್ಯ ಎಂಬ ಭಾವನೆ ಮೂಡುತ್ತಿದೆ. ಇಂಥ ಕಾರಣಗಳಿಂದಾಗಿಯೇ ಭಾರತದಂತಹ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಸ್ಥಳೀಯ ಸಂಸ್ಕೃತಿಗಳ ಶೋಧ ಹಾಗೂ ಅವುಗಳ ಒಳಗಿನ ಅಂತಃಸತ್ವಗಳನ್ನು ಪರಿಶೋಧಿಸುವ ಕಾರ್ಯಗಳು ಭರದಿಂದ ಸಾಗಿವೆ. ಇಂಥ ಪ್ರಯತ್ನದ ಭಾಗವಾಗಿ ಪ್ರಸ್ತುತ ಕಿರು ಹೊತ್ತಿಗೆ ರೂಪುಗೊಂಡಿದೆ.

ದಿನಾಂಕ: **20–11–2012** ರಂದು ಪ್ರಸಾರಾಂಗದ ವತಿಯಿಂದ ರಿಪ್ಪನ್‌ಪೇಟೆಯಲ್ಲಿ ನಡೆದ ಅರಿವು ವಿಸ್ತರಣಾ ಉಪನ್ಯಾಸ ಕಾರ್ಯಕ್ರಮದಲ್ಲಿ ನೀಡಿದ ಉಪನ್ಯಾಸದ ವಿಸ್ತೃತ ಬರಹ ರೂಪವೇ ಈ ಹೊತ್ತಿಗೆ. ಇದರಲ್ಲಿ ಸಮಕಾಲೀನ ಕನ್ನಡ ಜಗತ್ತು ಎದುರಿಸುತ್ತಿರುವ ಸವಾಲುಗಳಿಗೆ ಅದರ ಒಡಲಲ್ಲಿಯೇ ಪರಿಹಾರಗಳಿವೆ; ಎಂಬ ತಿಳುವಳಿಕೆಯೊಂದಿಗೆ ಕನ್ನಡ ಜನಪದ ಸಂಸ್ಕೃತಿಯ ಸ್ವರೂಪ–ಸಾಧ್ಯತೆಗಳನ್ನು ಕಟ್ಟಿಕೊಡುವ ಪ್ರಯತ್ನವಿದೆ. ಹೀಗೆ ಕಟ್ಟುವಾಗ ಅದರೊಳಗಿನ ಮಿತಿಗಳನ್ನು ಸಹ ಗುರುತಿಸುವ ಕೆಲಸವೂ ಆಗಿದೆ. ಇದರಿಂದಾಗಿ ಕನ್ನಡ ಸಂಸ್ಕೃತಿಯ ಅಸ್ತಿತ್ವದ ಬಗ್ಗೆ ಚಿಂತಿಸುವ ಆಲೋಚಿಸುವ ಕನ್ನಡಿಗರಿಗೆ ಈಓ ಬರಹ ಸಾಕಷ್ಟು ಉಪಯುಕ್ತವಾಗಲಿದೆ ಎಂಬುದು ನಮ್ಮ ಭಾವನೆ. ಇಂಥ ಮಹತ್ವದ ಜವಾಬ್ದಾರಿಯನ್ನು ಕೊಟ್ಟು ನನ್ನ ಆಲೋಚನೆಗೆ ಸಹಕರಿಸಿದ ನಮ್ಮ ಪ್ರಸಾರಾಂಗದ ನಿರ್ದೇಶಕರಾದ ಡಾ. ಜಿ. ಪ್ರಶಾಂತನಾಯಕ್ ಅವರಿಗೆ ಗೌರವ ಪೂರ್ವಕ ಕೃತಜ್ಞತೆಗಳು. ಇನ್ನೂ ಪ್ರಸಾರಾಂಗದ ಕೆಲಸಗಳಲ್ಲಿ ಕ್ರಿಯಾಶೀಲರಾಗಿರುವ ಉಪನಿರ್ದೇಶಕರಾದ ಡಾ. ಶಿವಾನಂದ ಕೆಳಗಿನಮನಿ, ಸಹಾಯಕ ನಿರ್ದೇಶಕರಾದ ಡಾ. ಕುಮಾರಸ್ವಾಮಿ ಹಾಗೂ ಪ್ರಸಾರಾಂಗದ ಸಿಬ್ಬಂದಿ ವರ್ಗದವರಾದ, ಶ್ರೀಮತಿ.ಗಿರಿಜ, ಶ್ರೀ ಅಣ್ಣಯ್ಯ, ಶಿವಪ್ರಸಾದ ಹಾಗೂ ಇತರೆ ಸಿಬ್ಬಂದಿ ವರ್ಗದವರಿಗೆ ಹೃತ್ಪೂರ್ವಕ ವಂದನೆಗಳು.

ದಿನಾಂಕ: ಡಾ. ಎಸ್.ಎಂ. ಮುತ್ತಯ್ಯ

'ಕನ್ನಡ ಜನಪದ ಸಂಸ್ಕೃತಿ' ವಿಷಯದ ಚರ್ಚೆಗೂ ಮುನ್ನ ಇಲ್ಲಿ ಬಳಸ ಲಾಗಿರುವ ಶಬ್ದಗಳ ಚರಿತ್ರೆ ಮತ್ತು ಅರ್ಥ ವಿಸ್ತಾರತೆಯನ್ನು ತಿಳಿಯುವುದು ಅಗತ್ಯ. 'ಕನ್ನಡ ಜನಪದ ಸಂಸ್ಕೃತಿ' ಎಂಬ ಶೀರ್ಷಿಕೆಯೊಳಗೆ 'ಕನ್ನಡ', 'ಜನಪದ' ಮತ್ತು 'ಸಂಸ್ಕೃತಿ' ಎಂಬ ಮೂರು ಶಬ್ದಗಳಿವೆ. ಇವುಗಳು ಬೆಳೆದು ನಿಂತಿರುವ ಬಗೆಯನ್ನು ಅವಲೋಕಿಸಿದರೆ ಈ ಮೂರು ಶಬ್ದಗಳು 'ಶಬ್ದ' ಎನ್ನುವ ಅರ್ಥದ ಆಚೆಗಿನ ಪರಿಭಾಷೆ, ಪರಿಕಲ್ಪನೆ ಎಂಬ ವಿಶಾಲ ನೆಲೆಯನ್ನು ಪಡೆದುಕೊಂಡಿವೆ. ಇವುಗಳನ್ನು ಕುರಿತಂತೆ ವಿದ್ವತ್ ವಲಯದಲ್ಲಿ ಮಾತ್ರವಲ್ಲ ಜನ ಸಾಮಾನ್ಯರ ವಲಯದಲ್ಲಿ ಕೂಡ ಭಿನ್ನ ಬಗೆಯ ಬೃಹತ್ ಪ್ರಮಾಣದ ಚರ್ಚೆಗಳು ನಡೆದಿವೆ. ಈ ಬಗೆಯ ವೈವಿಧ್ಯಮಯವಾದ ಚರ್ಚೆಗಳ ವಿಪುಲತೆ ಇವುಗಳ ಅರ್ಥ ಗ್ರಹಿಕೆಗೆ ಸಹಕಾರಿಯಾಗುವುದಕ್ಕಿಂತ ಓದುಗರಲ್ಲಿ ಗೊಂದಲ ಮೂಡಿಸುವಂತಾಗಿದೆ. ಹಾಗಾಗಿ ಈ ಪರಿಭಾಷೆಗಳ ಬಗೆಗೆ ಮಾತನಾಡುವಾಗ ಬಂದಿರುವ ವ್ಯಾಖ್ಯಾನಗಳ ವಿವಿಧ ನೆಲೆಗಳಲ್ಲಿ ಯಾವುದಾದರು ಒಂದು ನೆಲೆಯ ಜಾಡನ್ನು ಹಿಡಿದು ಸ್ಪಷ್ಟ ಅರ್ಥಕ್ಕೆ ಬದ್ಧವಾಗದೇ ಹೋದರೆ ಚರ್ಚೆ ನಿರ್ದಿಷ್ಟ ಹಾಗೂ ಸ್ಪಷ್ಟವಾದ ದಿಕ್ಕಿನಲ್ಲಿ ಮುನ್ನಡೆಯಲು ಸಾಧ್ಯವಾಗಲಾರದು. ಆದ್ದರಿಂದ ಇಲ್ಲಿ ಮೊದಲಿಗೆ ಈ ಪರಿಭಾಷೆ–ಪರಿಕಲ್ಪನೆಗಳ ಬಗೆಗೆ ನಡೆದಿರುವ ವಿಸ್ತಾರವಾದ ಚರ್ಚೆಗಳನ್ನು ಆಧರಿಸಿ ನಿರ್ದಿಷ್ಟವಾದ ಅರ್ಥಗಳನ್ನು ಕಂಡುಕೊಳ್ಳಬಹುದಾಗಿದೆ.

### ಕನ್ನಡ ಎಂಬುದು ಬರೀ ಹೆಸರಲ್ಲವೋ

ಸಾಮಾನ್ಯವಾಗಿ ಇಂದು ನಾವೆಲ್ಲರೂ 'ಕನ್ನಡ'ವನ್ನು ಭಾಷಾವಾಚಿಕೆಯಾಗಿ, 'ಕರ್ನಾಟಕ'ವನ್ನು ಪ್ರದೇಶವಾಚಿಕೆಯಾಗಿ ಬಳಸುತ್ತಿದ್ದೇವೆ. ಆದರೆ ಕನ್ನಡ ಚಿಂತನಾ ಚರಿತ್ರೆಯೊಳಗೆ ಕನ್ನಡ ಮತ್ತು ಕರ್ನಾಟಕಕ್ಕೆ ಈ ರೀತಿಯ ಸ್ಪಷ್ಟ ವ್ಯತ್ಯಾಸಗಳಿದ್ದಂತೆ ಕಾಣುವುದಿಲ್ಲ. ಉದಾ: ಕವಿರಾಜಮಾರ್ಗಕಾರ ಕನ್ನಡ ಶಬ್ದವನ್ನು ಭಾಷೆ ಹಾಗೂ ಪ್ರದೇಶಗಳೆರಡಕ್ಕೂ ಬಳಸಿದ್ದಾನೆ. "ಪಟಿ ಗನ್ನಡ' ಎಂದಾಗ ಭಾಷೆಯನ್ನು ಕುರಿತು ಹೇಳಿದರೆ; 'ಕಾವೇರಿಯಿಂದ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ', 'ಒಕ್ಕುಂದದ ನಡುವಣ ನಾಡೆ ಕನ್ನಡದ ತಿರುಳ್' ಎಂಬಲ್ಲಿ ಪ್ರದೇಶವನ್ನು ಹೇಳಿದ್ದಾನೆ. ಹಾಗೆಯೇ ಆಂಡಯ್ಯ ಹೇಳುವ 'ಕನ್ನಡಮೆನಿಪ್ಪ ನಾಡು ಚಲುವಾಯ್ತು' ಎಂಬಲ್ಲಿ ಪ್ರದೇಶ ಸೂಚಿತವಾದರೆ ಕನ್ನಡ, ಕಮ್ಮೆ, ತೆಲಗ, ತಿಗುಳ ಎಂಬ ನಿಜಗುಣ ಶಿವಯೋಗಿಗಳ ಪ್ರಯೋಗದಿಂದ ಕನ್ನಡ ಶಬ್ದ ಜನಾಂಗ ಅಥವಾ ಕುಲವನ್ನು ಸೂಚಿಸುತ್ತದೆ. ಮೇಲಿನ ಉಲ್ಲೇಖಗಳಿಂದ ಕನ್ನಡ ಎಂಬುದೊಂದೇ ಶಬ್ದ ಭಾಷೆ–ಪ್ರದೇಶ ಹಾಗೂ ಜನಾಂಗದ ಸೂಚಕವಾಗಿ ಬಳಕೆಯಾಗಿರುವುದು ಕಂಡುಬರುತ್ತದೆ. ಹಾಗಾದರೆ ಕರ್ನಾಟಕ ಶಬ್ದ ಬಳಕೆಯಾಗಿರುವ ಕ್ರಮ ಯಾವುದು? ಕನ್ನಡ, ಕರ್ನಾಟಕ ಶಬ್ದಗಳ ಪರಸ್ಪರ ಸಂಬಂಧವೇನು? ಎಂಬ ಪ್ರಶ್ನೆಗಳು ಇಲ್ಲಿ ಹುಟ್ಟಿಕೊಳ್ಳುತ್ತವೆ. ಈ ಪ್ರಶ್ನೆಗಳು ಬಯಸುವ ಉತ್ತರಕ್ಕಾಗಿ ಕನ್ನಡ ಭಾಷೆಯ ಪ್ರಾಚೀನ ಇತಿಹಾಸಕ್ಕೆ ಹೋಗಬೇಕಾಗುತ್ತದೆ. ಕನ್ನಡ ಭಾಷೆಯ ಪ್ರಾಚೀನತೆಯನ್ನು ಗುರುತಿಸುವಾಗ ಮಹಾಭಾರತದ ಸಭಾಪರ್ವ, ಭೀಷ್ಮಪರ್ವಗಳಲ್ಲಿ 'ಕರ್ನಾಟಕ' ಎಂಬ ಹೆಸರು ದೊರೆಯುತ್ತಾದರೂ ಮಹಾಭಾರತಕ್ಕಿಂತ ಮೊದಲಿನ ಪ್ರಾಚೀನ ತಮಿಳು ಶಾಸನ ಮತ್ತು ಕೃತಿಗಳಲ್ಲಿ ಕರುನಾಟರ್, ಕರ್ಣಾಟರ್, ಕರ್ನಾಡು ಎಂಬ ಪದಗಳು ದೊರೆಯುವುದರಿಂದ ಇವೇ ಈ ನಾಡಿನ ಭಾಷೆಯ ಮೂಲ ಹೆಸರುಗಳೆಂಬುದು ವಿದ್ವಾಂಸರ ಅಭಿಮತ. ಇದನ್ನು ಒಪ್ಪುವುದಾದರೆ ಕರ್ನಾಟಕ ಎಂಬ ಶಬ್ದ ರೂಪತಳೆದ ಬಗ್ಗೆ ಪ್ರಶ್ನೆ ಉದ್ಭವಿಸುತ್ತದೆ. ಇದಕ್ಕೆ 'ಕನ್ನಡದ' ಹೆಸರುಗಳು ಕನ್ನಡ ಸಾಹಿತ್ಯದಲ್ಲಿ ಪ್ರಯೋಗ ಕಾಣುವುದಕ್ಕೂ ಮೊದಲು ಸಂಸ್ಕೃತ ಶಾಸನಗಳು ಹಾಗೂ ಸಾಹಿತ್ಯದಲ್ಲಿ ಸಂಸ್ಕೃತೀಕರಣವನ್ನು ಪಡೆದು ಗೋಚರವಾಗುತ್ತವೆ' ಎಂಬ ಕಾರಣವನ್ನು ಗಮನಿಸಿದರೆ ಉತ್ತರ ಸಿಗುತ್ತದೆ. ಯಾವುದೇ ಭಾಷೆ ಮೊದಲೋ ಅಥವಾ ಅದನ್ನು ಮಾತನಾಡುವ ಜನಾಂಗ ಮೊದಲೋ ಎಂಬ

ಪ್ರಶ್ನೆಯನ್ನು ಇಲ್ಲಿ ಕೇಳಿಕೊಳ್ಳಬೇಕು. ಈ ಪ್ರಶ್ನೆಗೆ ಉತ್ತರ ಸುಲಭ. ಯಾವಾಗಲೂ ಜನಾಂಗ ಮೊದಲು ಆನಂತರ ಭಾಷೆ ಹಾಗಾಗಿ 'ಕನ್ನಡ' ಶಬ್ದ ಕನ್ನಡ ಕರುನಾಡರ್ ಎನ್ನುವ ಬಹುನಾಮಗಳಿಂದ ಜನಾಂಗವನ್ನು ಸೂಚಿಸುವ ಶಬ್ದವಾಗಿತ್ತು. ಮೇಲೆ ಹೇಳಿದಂತೆ ಈ ಶಬ್ದ ಸಂಸ್ಕೃತೀಕರಣದಿಂದಾಗಿ ಕರ್ಣಾಟಕ, ಕರ್ನಾಟಕ ಎಂಬ ಪ್ರದೇಶ ಸೂಚಕ ಶಬ್ದವಾಗಿ ಬಳಕೆಯಾಗಿದೆ ಎಂಬ ವಾದ ಸರಿ ಎನಿಸುತ್ತದೆ. ಈ ಶಬ್ದ ಈಚಿನ ದಿನಗಳಲ್ಲಿ ಹಿಂದಿಗಿಂತಲೂ ಇನ್ನೂ ವಿಶಾಲ ನೆಲೆಗೆ ತನ್ನ ಅರ್ಥವನ್ನು ವಿಸ್ತರಿಸಿಕೊಂಡಿದೆ. ಕನ್ನಡ ಮನಸ್ಸು, ಕನ್ನಡ ಸಂಸ್ಕೃತಿ, ಕನ್ನಡ ಪ್ರಜ್ಞೆ, ಕನ್ನಡತನ ಎಂಬಿತ್ಯಾದಿ ಶಬ್ದಗಳ ಬಳಕೆಯನ್ನು ಕಂಡರೆ ಇದು ಸ್ಪಷ್ಟವಾಗುತ್ತದೆ. ಒಟ್ಟಾರೆ ಕನ್ನಡ, ಕರ್ನಾಟಕ ಎಂಬ ಶಬ್ದಗಳು ಈ ನೆಲಕ್ಕೆ, ಈ ಭಾಷೆಗೆ ಇರುವ ಬರೀ ಹೆಸರುಗಳಲ್ಲ ಅದರಾಚೆಗಿನ ವಿಶಾಲ ನೆಲೆಯ ಭಾವನೆಗಳಾಗಿವೆ. ಹಾಗಾಗಿ ಇಲ್ಲಿ ಕನ್ನಡ ಎಂಬುದನ್ನು ಕೇವಲ ಭಾಷೆಯ ಹೆಸರೆಂದು ಭಾವಿಸದೆ ಕನ್ನಡ ಎಂದರೆ ಒಂದು ಮನಸ್ಸು, ಕುಲ, ಪ್ರಜ್ಞೆ, ವ್ಯಕ್ತಿತ್ವ ಎಂಬ ವಿಶಾಲ ಅರ್ಥವನ್ನು ಒಪ್ಪಿಕೊಳ್ಳಬಹುದಾಗಿದೆ.

**ಜನಪದ ಎಂಬ ಪರಂಪರೆಗಳು**

ಈ ಪರಿಕಲ್ಪನೆ ಕನ್ನಡ ಸಂದರ್ಭದಲ್ಲಿ ಬಳಕೆಗೆ ಬಂದಿರುವ ಎರಡು ಪ್ರಮುಖ ಮಾರ್ಗಗಳಿವೆ. ಇವುಗಳಲ್ಲಿ ಒಂದು ಸಂಸ್ಕೃತ ಮಾರ್ಗ. ಮತ್ತೊಂದು ಜರ್ಮನ್ ಮತ್ತು ಇಂಗ್ಲಿಷ್ ಮೂಲದ ಪಾಶ್ಚಾತ್ಯಮಾರ್ಗ. ಸಂಸ್ಕೃತ ಭಾಷೆಯಲ್ಲಿ ಜನಪದ ಎಂಬ ಶಬ್ದ ಬಳಕೆಯಲ್ಲಿದ್ದು ಅಲ್ಲಿ ಅದರ ಅರ್ಥ ಗ್ರಾಮೀಣ, ಹಳ್ಳಿಗ ಎಂಬುದಾಗಿದೆ. ಸಂಸ್ಕೃತದ ಈ ಶಬ್ದ ಕೇವಲ ಒಂದು ಪದವೆಂಬಂತೆ ಮೇಲೆ ಸೂಚಿಸಿದ ಅರ್ಥಕ್ಕೆ ಸೀಮಿತಗೊಂಡು ಕನ್ನಡ ಸಾಹಿತ್ಯದಲ್ಲಿ ಬಳಕೆಗೊಂಡಿರುವಂತೆ ಕಂಡುಬರುತ್ತದೆ. ಉದಾ: ಕವಿರಾಜಮಾರ್ಗದಲ್ಲಿ ಬರುವ '............... ಭಾವಿಸಿದ ಜನಪದಂ' ಸಾಲನ್ನು ಗಮನಿಸಬಹುದು. ಒಟ್ಟಾರೆ ಸಂಸ್ಕೃತದ ಈ ಮಾರ್ಗದಲ್ಲಿ ಜನಪದ ಎಂಬ ಶಬ್ದಕ್ಕೆ ಹೆಚ್ಚಿನ ಅರ್ಥವ್ಯಾಪ್ತಿಯೇನೂ ದೊರೆಯದೆ ಸೀಮಿತ ಅರ್ಥದಲ್ಲಿ ಮಾತ್ರ ಮುಂದುವರೆಯುವಂತಾಯಿತು.

ಪಾಶ್ಚಾತ್ಯ ಮಾರ್ಗದಲ್ಲಿ ಮಾತ್ರ 'ಜನಪದ' ಶಬ್ದ ಕೇವಲ ಶಬ್ದವಲ್ಲ. ಒಂದು ಅಥವಾ ಒಂದಕ್ಕಿಂತ ಹೆಚ್ಚಿನ ಅರ್ಥಗಳನ್ನು ಕೊಡುವ ಕಠಿಣ ಶಬ್ದ ಮಾತ್ರವಲ್ಲ. ಇವುಗಳಾಚೆಗೆ ಒಂದು ಪರಿಭಾಷೆಯಾಗಿ ಅದರಾಚೆಗೆ ಒಂದು ಪರಿಕಲ್ಪನೆಯಾಗಿ ಬೆಳೆದು ಬಂದಿರುವುದನ್ನು ಗಮನಿಸಬಹುದು. ಕನ್ನಡದಲ್ಲಿ ಈಗ ಜಾನಪದ ಅಧ್ಯಯನಗಳ ಸಂದರ್ಭದಲ್ಲಿ ಜನಪದ ಎನ್ನುವ ಪರಿಭಾಷೆ ಹೆಚ್ಚಿನ ಪ್ರಮಾಣದಲ್ಲಿ ಬಳಕೆಯಾಗುತ್ತದೆ. ಕನ್ನಡಿಗ ಈ ಜನಪದ ಶಬ್ದ ಇಂಗ್ಲಿಷ್ ಭಾಷೆಯ Folk ಎನ್ನುವ ಶಬ್ದ ಕನ್ನಡ ಅನುವಾದವಾಗಿದೆ. ಇಂಗ್ಲಿಷ್‌ನ Folk ಎನ್ನುವ ಶಬ್ದಕ್ಕೆ ಜರ್ಮನ್ ಭಾಷೆಯ 'Das Volk' ಎಂಬ ಶಬ್ದ ಮೂಲ. ಇದನ್ನು ರಮ್ಯ ರಾಷ್ಟ್ರೀಯವಾದದ ಪ್ರವರ್ತಕ ಗಾಟ್ ಪ್ರೀಡ್‌ಮನ್ ಹರ್ಡರ್ 18ನೇ ಶತಮಾನದ ಮಧ್ಯಯುಗದಲ್ಲಿ (1744–1802) ಬಳಸುತ್ತಾನೆ. ಹರ್ಡರ್‌ನ ಪ್ರಕಾರ 'Das Volk' ಎಂದರೆ 'ಮಣ್ಣಿಗೆ ಹತ್ತಿರವಾಗಿ ಬದುಕುವ ಗ್ರಾಮೀಣ ಜನರ ಗುಂಪು'. ಇದನ್ನೇ ಮುಂದೆ ಇಂಗ್ಲೆಂಡಿನ ಡಬ್ಲ್ಯೂ.ಜೆ. ಥಾಮ್ಸ್ (1846) The Folk ಎಂದು ಕರೆದ. ಇವುಗಳ ಪ್ರಭಾವದಿಂದಾಗಿ ಜನಪದ ಎಂಬ ಶಬ್ದವನ್ನು ಬಳಕೆಗೆ ತಂದರು. ಈ ಶಬ್ದ ಬಳಕೆಯ ಚರಿತ್ರೆಯಲ್ಲಿ ಬಳಸಿದವರು ನೀಡಿದ ಅರ್ಥಗಳನ್ನು ಇಲ್ಲಿ ಗಮನಿಸಬೇಕು. ಈಗಾಗಲೇ ಹೇಳಿದಂತೆ ಜರ್ಮನಿಯ ಹರ್ಡರ್ 18ನೇ ಶತಮಾನದ ಮಧ್ಯೆಭಾಗದಲ್ಲಿ ಜರ್ಮನಿಯೊಳಗೆ ನಡೆದ 'ಜರ್ಮನಿ ಏಕೀಕರಣ'ದ ಸಲುವಾಗಿ 'ರಮ್ಯ ರಾಷ್ಟ್ರೀಯವಾದ' ಎಂಬ ಸಿದ್ಧಾಂತವನ್ನು ಪ್ರತಿಪಾದಿಸಿದ. ಈ ವಾದದಲ್ಲಿ 'ಯಾವ ಎರಡು ರಾಷ್ಟ್ರಗಳು ಭೌಗೋಳಿಕ ಮತ್ತು ಐತಿಹಾಸಿಕ ಗುಣವೂ ಕೂಡ ಒಂದೇ ಆಗಿರುವುದಿಲ್ಲ.... ಆಯಾ ರಾಷ್ಟ್ರದ ಸಾಂಸ್ಕೃತಿಕ ವೈಶಿಷ್ಟ್ಯ ಆ ದೇಶದ ಜನ ಸಾಮಾನ್ಯರ ಸಾಹಿತ್ಯದಲ್ಲಿ, ಆಚಾರ–ವಿಚಾರಗಳಲ್ಲಿ ವ್ಯಕ್ತವಾಗುತ್ತದೆ. ಇಂಥ ಜನ ಸಾಮಾನ್ಯರನ್ನೇ ಹರ್ಡರ್ 'Das Volk' ಎಂದು

ಕರೆದ. ಇದರ ನಂತರ ಡಬ್ಲ್ಯೂಜೆ. ಥಾಮ್ಸ್ ಬಳಸಿದ The Folk ಎಂಬ ಪರ್ಯಾಯ ಶಬ್ದಕ್ಕೆ ಗ್ರಾಮೀಣ ವಲಯಕ್ಕೆ ಸೇರಿದ ಅವಿದ್ಯಾವಂತ, ಅನಕ್ಷರಸ್ಥ, ಕೆಳಸ್ಥರದ ಜನ ಎಂಬರ್ಥವಿದೆ. ಕನ್ನಡದಲ್ಲಿ Folk ಗೆ ಸಂವಾದಿಯಾಗಿ ಬಳಕೆಯಾದ ಜನಪದ ಶಬ್ದಕ್ಕೆ ಥಾಮ್ಸ್ ಅವರು ನೀಡಿದ ಅರ್ಥವೇ ಪ್ರಧಾನವಾಗಿತ್ತು. ಹಾಮಾನಾ ಅವರು ವಿವರಿಸಿದಂತೆ ಜನಪದವೆಂದರೆ ಗ್ರಾಮೀಣ ಅನಕ್ಷರಸ್ಥ ಮಣ್ಣಿಗೆ ಹತ್ತಿರವಾಗಿ, ಪ್ರಕೃತಿಯ ಭಾಗವಾಗಿ ಬದುಕುವ ಜನರ ಗುಂಪು. ಈ ವ್ಯಾಖ್ಯಾನಗಳು 20ನೇ ಶತಮಾನದ ಕೊನೆಯ ಹೊತ್ತಿಗೆ Folk ಎನ್ನುವ ಈ ಪದ ಅಮೇರಿಕಾದ ವಿದ್ವಾಂಸರ ದೃಷ್ಟಿಕೋನದಲ್ಲಿ ತನ್ನ ಅರ್ಥ ವ್ಯಾಪ್ತಿಯನ್ನೂ ಬದಲಾಯಿಸಿಕೊಂಡಿರುವುದನ್ನು ಗುರುತಿಸಬಹುದು. ಉದಾ: ಅಲನ್ ಡಂಡಸ್ ಎಂಬ ಅಮೆರಿಕಾದ ಜಾನಪದ ವಿದ್ವಾಂಸ Folk ಎಂಬುದಕ್ಕೆ ಕೊಡುವ ಅರ್ಥ ಹೀಗಿದೆ. 'ಒಂದು ಸವ ಾನ ಅಂಶವುಳ್ಳ ಜನರ ಗುಂಪೇ ಜನಪದ. ಆ ಸಮಾನ ಅಂಶ ಭಾಷೆ, ವೃತ್ತಿ, ಧರ್ಮ, ವಯಸ್ಸು ಇವುಗಳಲ್ಲಿ ಯಾವುದಾದರೂ ಒಂದು ಅಥವಾ ಅದಕ್ಕಿಂತ ಹೆಚ್ಚು ಅಂಶಗಳಾಗಿರಬಹುದು' ಈ ವ್ಯಾಖ್ಯಾನದ ಪರಿಣಾಮವಾಗಿ ಜನಪದ ಎಂದರೆ ಗ್ರಾಮೀಣರು, ಮಣ್ಣಿಗೆ ಹತ್ತಿರವಾಗಿ ಬದುಕುವ ಅನಕ್ಷರಸ್ಥ ಜನರು ಎಂಬ ಅಭಿಪ್ರಾಯಗಳ ಬದಲಾಗಿ ಆದಿವಾಸಿಗಳು, ನಗರವಾಸಿಗಳು, ಗ್ರಾಮವಾಸಿಗಳು ಎಲ್ಲರೂ ಜನಪದರು ಎಂಬ ಕಲ್ಪನೆ ರೂಪಗೊಂಡಿತು. ಈ ಬದಲಾವಣೆಯ ಪರಿಣಾಮ ನಗರ ಜಾನಪದ, ಕೈಗಾರಿಕಾ ಜಾನಪದ, ವಿದ್ಯಾರ್ಥಿ ಜಾನಪದ ಎಂಬಂತಹ ಚರ್ಚೆಗಳು ಶುರುವಾದವು. ಇಂದಿಗೆ ಮೇಲಿನ ಎಲ್ಲಾ ವ್ಯಾಖ್ಯಾನಗಳೂ ಬಳಕೆಗೊಳ್ಳುತ್ತಿದ್ದು, ಅರ್ಥಗ್ರಹಿಕೆಗೆ ಸಾಕಷ್ಟು ತೊಡಕುಂಟಾಗಿದೆ. ಭೂತ ಮತ್ತು ವರ್ತಮಾನಗಳನ್ನು ಭವಿಷ್ಯದ ದೃಷ್ಟಿಕೋನದ ಹಿನ್ನೆಲೆಯಲ್ಲಿ ನೋಡುವ ಅಮೆರಿಕಾದ ವಿದ್ವಾಂಸರ ಹೊಸ ಕ್ರಮದಿಂದ ಈ ಕ್ಷೇತ್ರದ ಗೊಂದಲಗಳು ಇನ್ನೂ ಹೆಚ್ಚಾಗಿವೆ. ಹಾಗಾಗಿ ಈ ಬಗ್ಗೆ ನಡೆದ ಚರ್ಚೆಗಳಲ್ಲಿ ದೊರೆಯುವ ಮಾಹಿತಿಗಳಿಂದ "ಜನಪದ ಎಂದರೆ ಹಳ್ಳಿಯ, ಮಣ್ಣಿನ ಮಕ್ಕಳ ಗುಂಪು; ಪರಂಪರೆಯನ್ನು ಮೌಲ್ಯಾಧಾರಿತವಾಗಿ ಮುಂದುವರೆಸಿಕೊಂಡು ಬಂದಿರುವ ಗುಂಪು. ಇಂಥ ಗುಂಪುಗಳು ಒಂದಲ್ಲ ಹಲವು" ಎಂಬುದಾಗಿ ಅರ್ಥವ್ಯಾಪ್ತಿಯನ್ನು ಸೀಮಿತಗೊಳಿಸಿಕೊಂಡು ಮುಂದುವರೆಯಬಹುದು.

## ಸಂಸ್ಕೃತಿ ಎಂಬ ಜೀವನ ವಿಧಾನ

'ಸಂಸ್ಕೃತಿ' ಎಂಬ ಶಬ್ದ ಬಳಕೆಗೆ ಬಂದಿದ್ದು 20ನೇ ಶತಮಾನದಲ್ಲಿ. ಆದರೆ ಇದನ್ನು ಬೇರೆ ಬೇರೆ ಹೆಸರಲ್ಲಿ ಕರೆಯುವ ಪ್ರಯತ್ನ ಆದಿಯಿಂದಲೂ ಚಾಲ್ತಿಯಲ್ಲಿತ್ತು. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಕಳೆದ 85 ವರ್ಷಗಳ ಹಿಂದೆ ಸಂಸ್ಕೃತಿ ಎಂಬ ಶಬ್ದದ ಬಳಕೆ ಇರಲಿಲ್ಲ. ಬದಲಿಗೆ ಸಂಸ್ಕಾರ, ಸದಾಚಾರ, ಸೌಜನ್ಯ, ಸಾತ್ವಿಕತೆ, ಮರ್ಯಾದೆ ಎಂಬ ಪದಗಳು ಬಳಕೆಯಲ್ಲಿದ್ದವು. ಇವುಗಳನ್ನೆ ಮುಂದೆ ಸಂಸ್ಕೃತಿ ಎಂಬ ಪರಿಕಲ್ಪನೆ ಒಳಗೊಳ್ಳುತ್ತಾ ಸಾಗಿದೆ. ಹಾಗಾಗಿ ಸಂಸ್ಕೃತಿ ಶಬ್ದ ತನ್ನ ಅರ್ಥ ಸಾಧ್ಯತೆಗಳನ್ನು ವಿಸ್ತರಿಸಿಕೊಂಡು ಇಂದು ಯಾವ ಅರ್ಥದಲ್ಲಿ ಬಳಕೆಗೊಳ್ಳುತ್ತಿದೆ ಎಂಬುದನ್ನು ಮುಂದಿನಂತೆ ಸ್ಥೂಲವಾಗಿ ವಿವೇಚಿಸಬಹುದು; ಈಗಾಗಲೇ ಹೇಳಿದಂತೆ ಸಂಸ್ಕೃತಿ ಎಂದರೆ ಬಹಳಷ್ಟು ವರ್ಷಗಳ ಕಾಲ ಮನುಷ್ಯನ ಮನಸ್ಸಿನ ಪರಿಪಕ್ವತೆಯ ಸ್ಥಿತಿಯನ್ನು ಸೂಚಿಸುವ ಪರಿಕಲ್ಪನೆಯಾಗಿತ್ತು. ಅದರಲ್ಲೂ ಈ ಮನಸ್ಥಿತಿಗೆ ಹಾಗೂ ಸಾಮಾಜಿಕ ಏಣಿ–ಶ್ರೇಣಿ ವ್ಯವಸ್ಥೆಗೂ ನಿಕಟ ಸಂಬಂಧವಿದೆ ಎಂಬಂತೆ ಬಿಂಬಿಸಲಾಗಿತ್ತು. ಅಂದರೆ ಮೇಲ್ವರ್ಗಗಳ ಜನರ ಮನಸಲ್ಲಿ ಮಾತ್ರ ಪರಿಪಕ್ವತೆ ಇರುತ್ತೆ ಎಂಬ ಭಾವನೆ ಅಚಲವಾಗಿ ಬೇರೂರಿತ್ತು. ಇದರ ನಂತರ ಪ್ರಕೃತಿಯ ಸಾಮಾನ್ಯ ಸ್ಥಿತಿಯಿಂದ ಉನ್ನತ ಸ್ಥಿತಿಗೆ ತಲುಪಿದ ಭೌತಿಕ–ಭೌದ್ಧಿಕ ಸಂಗತಿಗಳೆಲ್ಲವೂ ಸಂಸ್ಕೃತಿ ಎಂಬ ಹೊಸ ವ್ಯಾಖ್ಯಾನ ಕಾಣಿಸಿಕೊಳ್ಳುತ್ತದೆ. ಈ ವ್ಯಾಖ್ಯಾನಕಾರರು ಹೇಳುವಂತೆ ಕಾಡಿನಲ್ಲಿರುವ ಕಲ್ಲು ಪ್ರಕೃತಿ; ಆ ಕಲ್ಲು ಶಿಲ್ಪಿಯ ಕೈಯಿಂದ ಪೆಟ್ಟು ತಿಂದು ಮೂರ್ತಿ ರೂಪ ಪಡೆದಾಗ ಅದು ಸಂಸ್ಕೃತಿ ಹಾಗೆಯೇ ಮನುಷ್ಯನ ಬರೀ ಮಾತು ಪ್ರಕೃತಿ; ಸಂಗೀತದಿಂದ

ಕೂಡಿದ ಹಾಡು ಸಂಸ್ಕೃತಿ. ಇದರ ನಂತರದ ಸಂಸ್ಕೃತಿ ಅಧ್ಯಯನಗಳಲ್ಲಿ ಪ್ರಧಾನ ಪಾತ್ರ ವಹಿಸಿದ್ದು ಮಾನವಶಾಸ್ತ್ರದ ಹಿನ್ನೆಲೆಯ ಚಿಂತನೆಗಳು. ಈ ಚಿಂತನೆಗಳು 'ಮನುಷ್ಯನು ಪರಂಪರೆಯಿಂದ ಪಡೆದ ಬದುಕಿನ ಮೌಲ್ಯಗಳ ಮೊತ್ತ' 'ಮನುಷ್ಯನ ಜೀವನ ವಿಧಾನವೇ ಸಂಸ್ಕೃತಿ' ಎನ್ನುವ ವ್ಯಾಖ್ಯಾನಗಳನ್ನು ನೀಡಿದವು. ಇಂಥ ಪ್ರಯತ್ನಗಿ 'ಳ ಫಲವಾಗಿ ಸಂಸ್ಕೃತಿ ಪರಿಕಲ್ಪನೆ ತನ್ನ ಅರ್ಥ ಸಾಧ್ಯತೆಗಳನ್ನು ವಿಸ್ತರಿಸಿಕೊಂಡಿತು. ಇಲ್ಲಿನ 'ಜೀವನ ವಿಧಾನವೇ ಸಂಸ್ಕೃತಿ' ಎನ್ನುವುದನ್ನು ಒಪ್ಪುವುದಾದರೆ; ಪ್ರತಿಯೊಂದು ವ್ಯಕ್ತಿ, ಸಮೂಹ, ಕುಟುಂಬ, ಜಾತಿ, ಜನಾಂಗಗಳಿಗೆ ತನ್ನದೇ ಆದ ಜೀವನ ಕ್ರಮವಿರುತ್ತದೆ ಎಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಜೀವನ ಕ್ರಮ ಎಂದರೆ ಬದುಕಿನ ಧರ್ಮ, ಆರ್ಥಿಕತೆ, ವೃತ್ತಿಗಳು, ರೀತಿ–ನೀತಿಗಳು, ನಂಬಿಕೆ–ಸಾಂಪ್ರದಾಯ–ಆಚರಣೆಗಳು, ಆಹಾರ ಪಾನಿಯಾಗಳು, ಸಾಹಿತ್ಯಾದಿ ಕಲೆಗಳು ಇವುಗಳಿಗೆ ಪೂರಕವಾದ ಭೌತಿಕ ವಸ್ತುಗಳು, ಬೌದ್ಧಿಕ ಚಿಂತನೆಗಳು ಇವೆಲ್ಲವೂ ಸಂಸ್ಕೃತಿ ಎಂಬ ಪರಿಕಲ್ಪನೆಯೊಳಗೆ ಸೇರುತ್ತವೆ.

ಇಲ್ಲಿಯವರೆಗೂ ಕನ್ನಡ, ಜನಪದ, ಸಂಸ್ಕೃತಿ ಎಂಬ ಪರಿಕಲ್ಪನೆಗಳ ಬಗ್ಗೆ ಈವರೆಗೂ ದೀರ್ಘವಾದ ಚರ್ಚೆಗಳು ನಡೆದಿದ್ದು ಅದರ ಆಧಾರದ ಮೇಲೆ ಇವುಗಳ ಅರ್ಥವ್ಯಾಪ್ತಿಯನ್ನು ಹೀಗೆ ಸಂಕ್ಷೇಪಿಸಬಹುದು:

"ಕನ್ನಡ ಎಂದರೆ ಭಾ ಷೆ/ಪ್ರದೇಶಕ್ಕಿರುವ ಹೆಸರು ಮಾತ್ರವಲ್ಲ. ಬದಲಿಗೆ ಒಂದು ಪಾರಂಪರಿಕ ಕುಲ, ಒಂದು ಗುಣ ಒಂದು ಮನೋಧರ್ಮ, ಒಂದು ಮನಸ್ಸು, ಒಂದು ಪ್ರಜ್ಞೆ. ಇಂಥ ಪ್ರಜ್ಞೆಯುಳ್ಳ ಗ್ರಾಮೀಣ ಅಕ್ಷರಸ್ತರಲ್ಲದ, ದುಡಿಯುವ ಜನರ ಗುಂಪಿನ ಅಥವಾ ಗುಂಪುಗಳ ಜೀವನ ವಿಧಾನವೇ ಕನ್ನಡ ಜನಪದ ಸಂಸ್ಕೃತಿ".

## ಈ ಬರಹದ ಹಿಂದಿನ ಒತ್ತಾಸೆಗಳು

'ಕನ್ನಡ ಜನಪದ ಸಂಸ್ಕೃತಿ' ಎನ್ನುವ ಹೆಸರಲ್ಲಿ ರೂಪ ಪಡೆಯುತ್ತಿರುವ ಈ ಬರಹಕ್ಕೆ ಕೆಲವು ನಿರ್ಧಿಷ್ಟ ಒತ್ತಾಸೆಗಳಿವೆ. ಕನ್ನಡ ಜನಪದ ಸಮಾಜಗಳಲ್ಲಿ ಆಧುನಿಕ ವಿದ್ಯಾಮಾನಗಳಿಂದ ಉಂಟಾಗಿರುವ ಮಹತ್ತರ ಬದಲಾವಣೆಗಳಿಂದಾಗಿ ಬದುಕಿನ ಮೌಲ್ಯಗಳಲ್ಲಿ ಸಾಕಷ್ಟು ಏರು–ಪೇರಾಗಿದೆ. ನಮ್ಮ ಪಾರಂಪರಿಕ ತಿಳುವಳಿಕೆಯ ಸಂಗತಿಗಳಿಗೂ ಹೊಸಕಾಲದ ಸಂಗತಿಗಳಿಗೂ ಹೊಂದಾಣಿಕೆ ಆಗುತ್ತಿಲ್ಲ. ಈ ಕಾರಣದಿಂದ ಪರಂಪರೆಗೂ–ಆಧುನಿಕತೆಗೂ ಸಾಕಷ್ಟು ಸಂಘರ್ಷಗಳು ನಡೆದು ಆಧುನಿಕ ಮೌಲ್ಯಗಳು ವಿಜೃಂಬಿಸುತ್ತಿವೆ. ಪರಿಣಾಮ ಸಮಕಾಲೀನ ಸಮಾಜ ತೀವ್ರತರವಾದ ತಲ್ಲಣಗಳಿಗೆ ಒಳಗಾಗಿದೆ. ಇಂಥ ಮುಖ್ಯ ಕಾರಣದಿಂದಾಗಿ ಕನ್ನಡ ಜನಪದ ಸಂಸ್ಕೃತಿಯನ್ನು ಶೋಧಿಸಿ ಮರು ಕಟ್ಟಬೇಕಾಗಿದೆ. ಈ ಹಿನ್ನೆಲೆಯೊಳಗೆ ಪ್ರಸ್ತುತ ರೀತಿಯ ಶೋಧನೆಗೆ ಒತ್ತಾಯಿಸುವ ಸಂದರ್ಭಗಳಲ್ಲಿ ಕೆಲವು ಪ್ರಮುಖವಾದವುಗಳನ್ನು ಈ ಮುಂದಿನಂತೆ ಗುರುತಿಸಬಹುದಾಗಿದೆ.

### ಅ. ಧರ್ಮಗಳು ಒಡ್ಡಿರುವ ಅಪಾಯ

ಸಮಕಾಲೀನ ಸಮಾಜದ ಹಲವಾರು ಆತಂಕ ಹಾಗೂ ಸಮಸ್ಯೆಗಳಿಗೆ ಧರ್ಮಗಳು ಬಹುಮುಖ್ಯ ಕಾರಣವಾಗಿವೆ. ಬರಹ ಹಾಗೂ ಉನ್ನತ ವರ್ಗಗಳಿಗೆ ಸೇರಿದ ಪ್ರಧಾನ ಧಾರೆಯ ಧರ್ಮಗಳು ಪಾರಂಪರಿಕವಾಗಿ ಬೆಳೆದು ಬಂದ ದುಡಿಮೆಯ ಆಧರಿತ ಸೇವಾ ವೃತ್ತಿಗಳನ್ನು ಮೂಲೆ ಗುಂಪಾಗಿಸಿವೆ. ಅಷ್ಟೇ ಅಲ್ಲದೆ ಸಮಾಜದ ಶ್ರೇಣೀಕರಣ ವ್ಯವಸ್ಥೆಯನ್ನು ಸಮರ್ಥಿಸುವ ಮೂಲಕ ಸಮಾಜದ ಸಮುದಾಯಗಳಲ್ಲಿ ಮತೀಯ ಮತ್ಸರಗಳನ್ನು ಹೆಚ್ಚಿಸಿವೆ. ಹೀಗಾಗಿಯೇ ಪ್ರಸ್ತುತ ಕಾಲದಲ್ಲಿ ಹಿಂದೆಂದೂ ಕಾಣದಂತಹ ಕೋಮುಗಲಭೆಗಳು ಮತ್ತು ಹಿಂಸಾಚಾರಗಳು ತಲೆ ಎತ್ತಿ ನಿಂತಿವೆ. ಚಲನಶೀಲತೆಯಿಲ್ಲದ ಈ ಕರ್ಮಠ ಧರ್ಮಗಳಲ್ಲಿ ಯಾವುದೇ ರೀತಿಯ ಪರಿವರ್ತನೆಯ ಮನಸ್ಸಿಲ್ಲ. ಇಂಥ ಸ್ಥಿರ ಮನೋಭಾವ ತನ್ನ ಶಕ್ತಿ–ಸಾಮರ್ಥ್ಯ ಹಾಗೂ ಅನುಯಾಯಿಗಳ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುವ ದಿಕ್ಕಿನತ್ತ ಹೆಚ್ಚು ಒಲವು ತೋರುತ್ತಿವೆ. ಆ ಮೂಲಕ ಸಮಾಜದ ಶಾಂತಿಗಾಗಿ ದುಡಿಯಬೇಕಿದ್ದ ಧರ್ಮಗಳು ಅಶಾಂತಿಯನ್ನು ಸೃಷ್ಟಿಸುವ ಶಕ್ತಿಗಳಾಗಿ

ಕಾರ್ಯನಿರ್ವಹಿಸುತ್ತಿವೆ. ಇಂಥ ಸಂದರ್ಭದಲ್ಲಿ ಮಾನವ ಸಮಾಜ ಶಾಂತಿಗಾಗಿ ಆತೊರೆಯುತ್ತಿದೆ. ಇವರಿಗೆ ಶಾಂತಿ ಸಿಗುವುದಾದರೂ ಎಲ್ಲಿಂದ? ಅದು ನಮ್ಮ ಪಾರಂಪರಿಕವಾದ ಚಲನಶೀಲ ಜನಪದ ಸಂಸ್ಕೃತಿಯೊಳಗಿನ ಧರ್ಮಗಳಿಂದ ಮಾತ್ರ ಸಾಧ್ಯವೆಂಬುದರಲ್ಲಿ ಯಾವುದೇ ಅನುಮಾನಗಳು ಉಳಿದಿಲ್ಲ.

ಆ. ಹೆಚ್ಚುತ್ತಿರುವ ಸ್ವಜನ ಪಕ್ಷಪಾತ

ಮಾನವ ಸಮಾಜದ ಅತ್ಯಂತ ಶಕ್ತಿಶಾಲಿ ಸಂಗತಿ ಜಾತಿ, ಜಾತಿ ಇರುವುದೇ ಇನ್ನೊಂದು ಜಾತಿಯ ಜನರಿಗೆ ಹಿಂಸೆಕೊಟ್ಟು ಹಿಂದೆ ತಳ್ಳುವುದಕ್ಕಾಗಿ ಎಂಬ ವಾತಾವರಣವನ್ನು ನಾವು ಇಂದು ಕಾಣುತ್ತಿರುವುದು ಸರ್ವೇ ಸಾಮಾನ್ಯವಾಗಿದೆ. ಮನುಷ್ಯ ಪ್ರತೀ ಹಂತದ ಬೆಳವಣಿಗೆಗೆ ಜಾತಿ ಮೆಟ್ಟಿಲಾಗಿ ಕಾರ್ಯನಿರ್ವಹಿಸುತ್ತಿದೆ. ಇಂಥ ಜಾತಿ, ಜಾತಿಯೊಳಗಿನ ಉಪಜಾತಿಗಳ ಕಾರಣಗಳಿಂದಾಗಿ ಹಾಗೂ ಮನುಷ್ಯನಲ್ಲಿ ಮೂಡುತ್ತಿರುವ ಸ್ವಾರ್ಥಪರತೆಯಿಂದಾಗಿ ಸ್ವಜನ ಪಕ್ಷಪಾತವೆಂಬ ದೊಡ್ಡ ಸಮಸ್ಯೆ ನಮ್ಮ ಸಮಕಾಲೀನ ಬದುಕನ್ನು ಕಾಡಿಸುತ್ತಿದೆ. ಭ್ರಷ್ಟಾಚಾರದಂತಹ ಪೆಡಂಭೂತ ಶಕ್ತಿಶಾಲಿಯಾಗಿ ತಲೆಎತ್ತಿ ನಿಲ್ಲುವುದಕ್ಕೂ ಇದೇ ಸ್ವಜನ ಪಕ್ಷಪಾತ ಪ್ರಮುಖ ಕಾರಣವಾಗಿದೆ. 'ಯಾರು ಏನಾದರೆ ಏನು? ಹೇಗಿದ್ದರೇನು? ನಾನು ನಮ್ಮವರು ಚನ್ನಾಗಿದ್ದರೆ ಸಾಕು' ಎನ್ನುವ ಭಾವನೆ ಇಂದಿನ ದಿವ್ಯ ಮಂತ್ರವಾಗಿದೆ. ಸಮೂಹದ ಹಿತಾಸಕ್ತಿ ಮಾಯವಾಗಿ ವ್ಯಕ್ತಿ ಹಿತಾಸಕ್ತಿ ಪ್ರಧಾನವಾಗಿ ವಿಜೃಂಬಿಸುತ್ತಿದೆ. ಈ ಕಾರಣದಿಂದಾಗಿ ಇಡೀ ಸಾಮಾಜಿಕ ವ್ಯವಸ್ಥೆ ದ್ವೇಷ–ಅಸೂಯೆ, ಅನ್ಯಾಯ–ಅನಾಚಾರಗಳ ದಳ್ಳುರಿಯಲ್ಲಿ ಬೇಯುತ್ತಿದೆ. ಇದಕ್ಕೆ ಪರಿಹಾರ ಜನರಲ್ಲಿ ಸಮೂಹ ಪ್ರಜ್ಞೆ ಜಾಗೃತಗೊಳ್ಳಬೇಕಿದೆ. ಪರರ ಹಿತದಲ್ಲಿ ತನ್ನ ಹಿತವನ್ನು ಕಾಣುವ ದೊಡ್ಡ ಮನಸ್ಸು ಮನುಷ್ಯನಲ್ಲಿ ಬರಬೇಕಿದೆ. ಇದಕ್ಕಿರುವ ಪರಿಹಾರ ತನ್ನ ಪೂರ್ವಿಕರ ಆದರ್ಶ ಬದುಕನ್ನು ಒಮ್ಮೆ ಹೊರಳಿ ನೋಡುವುದೇ ಆಗಿದೆ.

ಇ. ಮಾನವ ಸಂಬಂಧಗಳಲ್ಲಿ ಸಡಿಲತೆ

ಪ್ರಸ್ತುತ ಸಮಾಜ ಪರಸ್ಪರ ವ್ಯಕ್ತಿಗಳ ನಡುವೆ ಇರಬೇಕಾದ ವ್ಯಕ್ತಿಗೌರವ ಹಾಗೂ ಬಂಧುತ್ವದ ಸಾಚಾತನದ ಕೊರತೆಯನ್ನು ಎದುರಿಸುತ್ತಿದೆ. ಪತಿ–ಪತ್ನಿಯರ ಸಾಂಸಾರಿಕ ಸಂಬಂಧಗಳಿಂದ ಹಿಡಿದು ಕೌಟುಂಬಿಕ ಹಾಗೂ ಸಮಾಜದ ಪ್ರತಿಯೊಂದು ಹಂತದಲ್ಲೂ ಮಾನವೀಯ ಸಂಬಂಧಗಳಲ್ಲಿ ಸಡಿಲತೆ ಕಂಡುಬರುತ್ತಿದೆ. ಈ ಸ್ಥಿತಿ ಯಾವುದೇ ಒಂದು ಪ್ರದೇಶ, ಸಮುದಾಯ, ಜಾತಿ–ಜನಾಂಗಕ್ಕೆ ಸೀಮಿತವಾದ ಸಮಸ್ಯೆಯಲ್ಲ. ಎಲ್ಲಾ ಕ್ಷೇತ್ರಗಳಲ್ಲೂ ಈ ಸಮಸ್ಯೆಯಿದ್ದು ಪ್ರಮಾಣ ಮತ್ತು ಸ್ವರೂಪಗಳಲ್ಲಿ ಅಲ್ಪ–ಸ್ವಲ್ಪ ವ್ಯತ್ಯಾಸವಿದೆ ಅಷ್ಟೆ. ಮಾನವ ಜೀವಿಗಳ ನಡುವೆ ಬದುಕಿನ ಅನಿವಾರ್ಯತೆಯ ಭಾಗವಾಗಿದ್ದ ಸಂಬಂಧಗಳು ಬೆಸೆದುಕೊಳ್ಳುತ್ತಿರುವುದು ಸಂಬಂಧ ಬೆಳೆಸುವ ವ್ಯಕ್ತಿಯ ಲಾಭ–ನಷ್ಟಗಳನ್ನು ಆಧರಿಸಿದೆ. ರಕ್ತ ಸಂಬಂಧ, ಕುಟುಂಬ, ಸಂಸಾರ, ಸ್ನೇಹ, ಪ್ರೀತಿ–ಪ್ರೇಮ ಮತ್ತಿತರ ಮೌಲ್ಯಗಳು ಇಂದಿಗೆ ಹುಸಿ ಮೌಲ್ಯಗಳು ಎಂಬಂತೆ ಬಿಂಬಿತಗೊಳ್ಳುತ್ತಿವೆ. ಇವೆಲ್ಲ ಕಾರಣಗಳಿಂದಾಗಿ ಮನುಷ್ಯ ಸಂಬಂಧಗಳ ಬೆಸುಗೆಯಿಂದ ಸಿಗುವ ಸುಖ–ಸಂತೋಷಗಳು ಮಾಯವಾಗಿ ದುಃಖ ದುಮ್ಮಾನಗಳೆ ಹೆಚ್ಚಾಗಿವೆ. ಇಂಥ ಸ್ಥಿತಿಯಿಂದ ಮನುಷ್ಯ ಪಾರಾಗದ ಹೊರತು, ಅನ್ಯ ಮಾರ್ಗವಿಲ್ಲ. ಮನುಷ್ಯನ ಸುಖದ ಮೂಲವೇ ಬಂಧುತ್ವದ ಬಂಧ. ಇದನ್ನು ಆಧುನಿಕ ಮನುಷ್ಯ ಅರ್ಥಮಾಡಿಕೊಳ್ಳಬೇಕಿದೆ. ಇದಕ್ಕಿರುವ ದಾರಿ ತನ್ನ ಪೂರ್ವ ಪರಂಪರೆಯ ಸಂಬಂಧಗಳ ಸ್ವರೂಪದ ಗುಟ್ಟನ್ನು ಅರಿಯಬೇಕಾಗಿರುವುದಾಗಿದೆ.

ಈ. ಶ್ರಮದಿಂದ ದೂರ

ಇಂದು ನಮ್ಮ ಅಭಿವೃದ್ಧಿಗೆ ಬೇಕಿರುವ ಸಂಪನ್ಮೂಲಗಳಲ್ಲಿ ನೈಸರ್ಗಿಕ ಸಂಪನ್ಮೂಲಗಳಷ್ಟೇ ಮುಖ್ಯವಾದುದು ಮಾನವ ಸಂಪನ್ಮೂಲ ಮಾನವ ತನಗಿರುವ ಬೌದ್ಧಿಕ ಹಾಗೂ ಭೌತಿಕ ಶಕ್ತಿ ಮತ್ತು ಚತುರತೆಗಳನ್ನು ಬಳಸಿದರೆ ಮಾತ್ರ ಅದು ಮಾನವ ಸಂಪನ್ಮೂಲವಾಗಿ ಪರಿವರ್ತಿತಗೊಳ್ಳುತ್ತದೆ. ಇದನ್ನರಿತೇ ಆದಿಮಾನವನಕಾಲದಿಂದಲೂ ಮನುಷ್ಯ ತನ್ನ

ದೇಹ ಶ್ರಮವನ್ನು ಬಳಸಿ ಅಭಿವೃದ್ಧಿ ಮತ್ತು ಆರೋಗ್ಯವನ್ನು ಸಂಪಾದಿಸಿದ್ದ. ಆದ ಕಾರಣದಿಂದಲೇ ದೈಹಿಕವಾಗಿ ಶಕ್ತಿಶಾಲಿಯಾಗಿ ದುಡಿಯುವ ವ್ಯಕ್ತಿಗೆ ಅವರ ಸಮಾಜದಲ್ಲಿ ಸಾಕಷ್ಟು ಗೌರವ, ಸ್ಥಾನ–ಮಾನಗಳು ದೊರಕುತ್ತಿದ್ದವು. ಅಂದರೆ ಮನುಷ್ಯ ತನಗಿರುವ ದುಡಿಯುವ ಸಾಮರ್ಥ್ಯದ ಮೇಲೆ ತನ್ನ ಮೌಲ್ಯವನ್ನು ಪಡೆಯುತ್ತಿದ್ದ. ಆದರೆ ಪ್ರಸ್ತುತ ಸಮಾಜದಲ್ಲಿ ಶ್ರಮ ಯಾರಿಗೂ ಬೇಡವಾಗಿದೆ. ಮೈಮುರಿದು ಶ್ರಮಪಡುವುದೆಂದರೆ ಅದೊಂದು ರೀತಿಯ ಶಿಕ್ಷೆ ಎನ್ನುವ ಭಾವನೆ ಬೆಳೆದಿದೆ. ಶ್ರಮವಿಲ್ಲದ ಬದುಕನ್ನು ಕಟ್ಟಿಕೊಳ್ಳುವುದೇ ಈ ಹೊತ್ತಿನ ಬಹುದೊಡ್ಡ ಆದರ್ಶವಾಗಿದೆ. ಆದ್ದರಿಂದಾಗಿಯೇ ಹಳ್ಳಿಯಲ್ಲಿ ರೈತ ತನ್ನ ಮಗ/ಮಗಳು ಸರಿಯಾಗಿ ಶಾಲೆಗೆ ಹೋಗುತ್ತಿಲ್ಲ: ನಿಷ್ಠೆಯಿಂದ ಓದುತ್ತಿಲ್ಲ ಎನಿಸಿದರೆ ನಿನಗೆ ನೇಗಿಲೇ/ಕುರ್ಜಿಗೆಯೇ ಗತಿ ಎಂಬುದಾಗಿ ಹೆದರಿಸುವಂತಾಗಿದೆ. ಅಂದರೆ ಶಾಲಾಶಿಕ್ಷಣ ನಮ್ಮ ಶ್ರಮವಿಲ್ಲದ ಬದುಕನ್ನು ಪಡೆಯುವ ಒಂದು ಮಾರ್ಗ ಎಂಬಂತಾಗಿದೆ. ಇಂಥ ಆಲೋಚನೆ ಹಾಗೂ ಚಿಂತನೆಗಳ ಫಲವಾಗಿ ನಮ್ಮ ಸಮಾಜದ ಶ್ರಮಾಧಾರಿತ ವೃತ್ತಿಗಳೆಲ್ಲವೂ ಕಿಮ್ಮತ್ತನ್ನು ಕಳೆದುಕೊಂಡು ಯಾರಿಗೂ ಬೇಡವಾದ ಕ್ಷೇತ್ರಗಳಾಗಿವೆ. ಇದರಿಂದಾಗಿ ಕೃಷಿ, ಪಶುಪಾಲನೆ, ಕರಕುಶಲ ಕಲೆಗಳು ಇವೇ ಮೊದಲಾದ ವೃತ್ತಿಗಳಿಂದ ನಾವು ನಿರಾಯಾಸವಾಗಿ ಪಡೆಯುತ್ತಿದ್ದ ಸಾಮಗ್ರಿಗಳನ್ನು ಇಂದು ಹೊರ ದೇಶಗಳಿಂದ ಕಷ್ಟಪಟ್ಟು ಆಮದು ಮಾಡಿಕೊಳ್ಳುವಂತಹ ಸ್ಥಿತಿಗೆ ತಲುಪಿದ್ದೇವೆ. ದೇಹ ಶ್ರಮ ಮನುಷ್ಯನ ಮೂಲಭೂತ ಅಗತ್ಯಗಳನ್ನು ಪೂರೈಸುವುದು ಮಾತ್ರವಲ್ಲದೆ ಪರೋಕ್ಷವಾಗಿ ಮನುಷ್ಯನ ಆರೋಗ್ಯಕ್ಕೂ ಕಾರಣವಾಗಿದ್ದವು. ಈ ಸಂಗತಿ ಇಂದಿಗೆ ಸಂಪೂರ್ಣ ವಿಸ್ಮೃತಿಗೆ ಒಳಗಾಗಿ ಮಾನವ ಸಂಪನ್ಮೂಲ ವ್ಯರ್ಥವಾಗುತ್ತಿದೆ. ಜಗತ್ತಿನ ಹಲವಾರು ದೇಶಗಳು ಶ್ರಮಕ್ಕೆ ಅಗತ್ಯವಿರುವ ಮಾನವ ಸಂಪನ್ಮೂಲದ ಕೊರತೆಯನ್ನು ಎದುರಿಸುತ್ತಿವೆ. ಇದರಿಂದಾಗಿಯೇ ಉತ್ಪಾದನೆಗಳ ಕೊರತೆ ಮತ್ತು ಆರೋಗ್ಯದ ಸಮಸ್ಯೆಗಳನ್ನು ಎದುರಿಸುವಂತಾಗಿದೆ. ಈ ವಿಷಯದಲ್ಲಿ ನಮ್ಮಂಥ ದೇಶಗಳದ್ದು ಮತ್ತೊಂದು ರೀತಿಯ ಸಮಸ್ಯೆ. ಮಾನವ ಸಂಪನ್ಮೂಲ ಸಾಕಷ್ಟು ಪ್ರಮಾಣದಲಿದ್ದಾಗ್ಯೂ ಅದು ಸದ್ವಿನಿಯೋಗವಾಗದೆ ಸಮಸ್ಯೆಗಳಿಗೆ ಮೂಲವಾಗಿದೆ. ಇಂಥ ಸ್ಥಿತಿಯನ್ನು ಆಳುವ ಸರ್ಕಾರಗಳು ಇನ್ನಷ್ಟು ಗಟ್ಟಿಗೊಳಿಸುತ್ತಿರುವುದು ನಮ್ಮ ದೊಡ್ಡ ದುರಂತ. ಶಿಕ್ಷಣ ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಬೇಕಿತ್ತು. ಆದರೆ ಅದಕ್ಕೆ ತದ್ವಿರುದ್ಧವಾಗಿ ದೇಹ ಶ್ರಮವಿಲ್ಲದ ಉದ್ಯೋಗ ಗಳಿಕೆಯ ಮಾರ್ಗವಾಗಿ ರೂಪುಗೊಂಡಿರುವುದು ಅತ್ಯಂತ ಅಪಾಯಕಾರಿಯಾದುದಾಗಿದೆ. ಈ ವಿಷಯದಲ್ಲಿ ದೇಹ ಶ್ರಮದ ಪ್ರಾಮುಖ್ಯತೆಯನ್ನು ಅರ್ಥಮಾಡಿಕೊಂಡು ಇಂದಿನ ಯುವ ಶಕ್ತಿಯನ್ನು ಈ ದಿಕ್ಕಿನ ಬದುಕಿಗೆ ಸೆಳೆಯಬೇಕಿದೆ.

ಉ. ಭೌತಿಕ ಸಂಪತ್ತಿನ ವ್ಯಾಮೋಹ

ಪ್ರಸ್ತುತ ನಮ್ಮ ಸಮಕಾಲೀನ ಸಮಾಜದ ಪ್ರತಿಯೊಬ್ಬ ಪ್ರಜೆಯ ಕಣ್ಣೆದುರಿಗೆ ಕಾಣುತ್ತಿರುವ ಬಹುದೊಡ್ಡ ಆದರ್ಶವೆಂದರೆ ಅದು ಒಂದೇ; ಹಣ–ಆಸ್ತಿಗಳ ಸಂಪಾದನೆ. ಹಣ–ಆಸ್ತಿಗಳಿಂದ ಶಕ್ತಿಶಾಲಿಯಾದವರಿಗೆ ಸಮಾಜದಲ್ಲಿ ಗೌರವ ಸ್ಥಾನಮಾನಗಳು ಹೆಚ್ಚಾಗುತ್ತಿವೆ. ಹಾಗಾಗಾಗಿ ಸಂಪತ್ತನ್ನು ಕ್ರೋಢೀಕರಿಸುವ ಮಾನವನ ಪ್ರಯತ್ನಗಳು ಕೂಡ ಜಾಸ್ತಿಯಾಗಿವೆ. ಗಳಿಕೆ ಮುಖ್ಯವಾಗಿ ಗಳಿಕೆಯ ಮಾರ್ಗಗಳು ಯಾವುದಾದರೇನು? ಎನ್ನುವ ಸ್ಥಿತಿ ನಿರ್ಮಾಣವಾಗಿದೆ. ಇಂಥ ಪ್ರಯತ್ನಗಳ ದುರಂತವೆಂದರೆ ಗಳಿಸುವ ಪ್ರಯತ್ನಗಳಲ್ಲಿ ಮನುಷ್ಯನ ಕನಿಷ್ಟ ಅಗತ್ಯಗಳನ್ನು ಲೆಕ್ಕಿಸದೆ ದುರ್ಬಲ ವರ್ಗಗಳಿಂದ ಬದುಕುವ ಹಕ್ಕುಗಳನ್ನು ಕಿತ್ತುಕೊಳ್ಳಲಾಗುತ್ತಿದೆ. ಬಡತನ ಕುಟುಂಬದ ಗರತಿಯ ಕೊರಳಿನ ತಾಳಿಯನ್ನೆ ಕಿತ್ತುಕೊಂಡು ಶ್ರೀಮಂತರ ಮಹಿಳೆಯ ಕೊರಳಿಗೆ ಶೃಂಗಾರದ ಪದಕ ಮಾಡಿಸಿಕೊಳ್ಳುವಂತಹ ಸ್ಥಿತಿ. ಇದರಿಂದಾಗಿಯೇ ಸಮಾಜದಲ್ಲಿ ಸಾಮಾಜಿಕ–ಆರ್ಥಿಕ ವ್ಯವಸ್ಥೆಗಳಲ್ಲಿ ತೀವ್ರತರವಾದ ಅಸಮಾನತೆ ಮನೆಮಾಡಿದೆ. ಇಲ್ಲಿ ಗಮನಿಸಬೇಕಾದ ಸಂಗತಿ ಎಂದರೆ ಇಂದಿನ ಜನರಿಗೆ ಭೌತಿಕ ಆಸ್ತಿ ಗಳಿಕೆಯ ಮೇಲೆ ಇದ್ದಷ್ಟು ವ್ಯಾಮೋಹ ಬೌದ್ಧಿಕ ಸಂಪತ್ತನ್ನು, ಆಂತರಿಕ ಅಂತಃಸತ್ವವನ್ನು

ಗಳಿಸುವಲ್ಲಿ ಇಲ್ಲವೇ ಇಲ್ಲ. ಇದರ ದುಷ್ಪರಿಣಾಮಗಳನ್ನು ನಾವೆಲ್ಲ ಇಂದು ಅನುಭವಿಸುತ್ತಿದ್ದೇವೆ. ಇಂಥ ಸ್ಥಿತಿಯಿಂದ ಮನುಷ್ಯ ಪಾರಾಗಬೇಕಾದ ಅನಿವಾರ್ಯತೆ ಖಂಡಿತಾ ಇದ್ದು, ಅದು ಸಾಧ್ಯವಾಗಬೇಕಿದೆ.

ಮೇಲೆ ವಿವರಿಸಲಾದ ಮೌಲ್ಯಗಳಲ್ಲದೆ ಇನ್ನೂ ಅನೇಕ ಮೌಲ್ಯಗಳು ಈ ನೆಲದ ಜಾಯಮಾನಕ್ಕೆ ತದ್ವಿರುದ್ಧವಾದವುಗಳಾಗಿವೆ. ಹಾಗಾಗಿಯೇ ಆಧುನಿಕ ಸಮಾಜದ ಸಂದರ್ಭದೊಳಗೆ ಸಮಾಜದಲ್ಲಿ ಅಭಿವೃದ್ಧಿಯ ಹೆಸರಲ್ಲಿ ನಡೆಯುತ್ತಿರುವ ಬೆಳವಣಿಗೆಗಳು ಇಂದಿನ ತವಕ ತಲ್ಲಣಗಳಿಗೆ ಕಾರಣವಾಗುತ್ತಿವೆ. ಈ ನೆಲದ ಕೆಲವು ಜನರಿಗಾದರೂ ನಮ್ಮ ಜಾಯಮಾನದ ಹಾದಿಯನ್ನು ಬಿಟ್ಟು ನಮ್ಮದಲ್ಲದ ದಾರಿಯಲ್ಲಿ ನಡೆಯಲಾರಂಬಿಸಿದ್ದೇವೆ ಎಂಬ ಅರಿವು ಮೂಡಿ ಆತಂಕವನ್ನು ಸೃಷ್ಟಿಸಿದೆ. ಈ ಆತಂಕ ನಮ್ಮ ಸಮುದಾಯಗಳು ನಡೆದು ಬಂದ ದಾರಿಗಳನ್ನು ಒಮ್ಮೆ ಹಿಂದುರಿಗಿ ನೋಡುವ ಒತ್ತಡವನ್ನು ಉಂಟುಮಾಡಿವೆ. ಆದ್ದರಿಂದಲೇ ಇತ್ತೀಚಿನ ದಿನಗಳಲ್ಲಿ ನಮ್ಮ ಪರಂಪರೆಯ ಜೀವನ ವಿಕಾಸವನ್ನು ಗುರುತಿಸಿಕೊಳ್ಳುವ ಪ್ರಯತ್ನಗಳು ಆರಂಭವಾಗಿವೆ. ಇಂಥ ಪ್ರಯತ್ನಗಳ ಒಂದು ಭಾಗವಾಗಿ ಪ್ರಸ್ತುತ ಚಿಂತನೆಯನ್ನು ಬೆಳಸಲಾಗಿದೆ.

### ಆಕರಗಳು

ಕನ್ನಡ ಜನಪದ ಸಂಸ್ಕೃತಿಯ ಸ್ವರೂಪವನ್ನು ಕಟ್ಟಿಕೊಳ್ಳುವುದಕ್ಕೆ ಅನೇಕ ಸವಾಲುಗಳಿವೆ. ಇದಕ್ಕೆ ಕಾರಣ ಅತ್ಯಂತ ಚಲನಶೀಲ ಮತ್ತು ಸಂವೇದನಾಶೀಲವಾದ ಬದುಕುಗಳು ತೀವ್ರತರವಾದ, ವೇಗವಾದ ಪಲ್ಲಟಗಳಿಗೆ ಗುರಿಯಾಗುತ್ತಿರುವುದು. ದಾಖಲಾತಿಯನ್ನು ಇಚ್ಛಿಸಿದ ಈ ಬದುಕಿನ ವಿವರಗಳು ಕಾಲಗರ್ಭದಲ್ಲಿ ಮರೆಯಾಗಿ ಹೋಗಿವೆ. ಇದ್ದ ಕೆಲವಾರು ವಿಚಾರಗಳು ಗುರುತಿಸಲಾಗದಷ್ಟು, ಮೂಲದಿಂದ ಬೇರೆಯಾಗುವಷ್ಟು ಭಿನ್ನ ಸ್ವರೂಪ ಪಡೆದಿವೆ. ಆದರೂ ಈಗಾಗಲೇ ಸಂಗ್ರಹವಾಗಿರುವ ಸಾಹಿತ್ಯ, ಸಾಹಿತ್ಯವನ್ನು ಕುರಿತು ಬಂದಿರುವ ಬರಹಗಳು; ಈಗಲೂ ಬದಲಾದ ರೂಪದಲ್ಲಿರುವ ಸಾಹಿತ್ಯಾದಿ ಕಲೆಗಳು, ಇಂದಿಗೂ  ಆಚರಣೆಯಲ್ಲಿರುವ ಹಲವಾರು ನಂಬಿಕೆ, ಸಂಪ್ರದಾಯ, ಆಚರಣೆಗಳು; ಇಂದಿಗೂ ಉಸಿರಾಡುತ್ತಿರುವ ಗ್ರಾಮೀಣ, ಶ್ರಮ ಸಮುದಾಯಗಳ ಬದುಕುಗಳು ನಮಗೆ ಕನ್ನಡ ಜನಪದ ಸಂಸ್ಕೃತಿಯನ್ನು ಕಟ್ಟಿಕೊಳ್ಳುವ ಪ್ರಮುಖ ಆಕರಗಳಾಗಿವೆ. ಈ ಆಕರಗಳನ್ನು ಬಳಸಿಕೊಂಡು ಕನ್ನಡ ಜನಪದ ಸಂಸ್ಕೃತಿಯ ರೂಪವನ್ನು ಕಟ್ಟಿಕೊಳ್ಳುವ ಪ್ರಾಮಾಣಿಕ ಪ್ರಯತ್ನ ಇಲ್ಲಿ ನಡೆದಿದೆ.

## ಕನ್ನಡ ಜನಪದ ಸಂಸ್ಕೃತಿಯ ಮೂಲಾಂಶಗಳು

ನಮ್ಮ ಕನ್ನಡ ಜನಪದಗಳು ಪ್ರಧಾನವಾಗಿ ನಂಬಿದ್ದು ಮನುಷ್ಯಪರವಾದ ದೇವರು–ಧರ್ಮವನ್ನು; ದೇಹ ಪ್ರಧಾನ ಕಾಯಕ ಮೌಲ್ಯವನ್ನು; ಸಮಷ್ಟಿಯ ಹಿತಾಸಕ್ತಿಯನ್ನು; ಭೌತಿಕ ಸಂಪತ್ತಿನ ನಿರಾಕರಣೆಯ ಭಾವನೆಯನ್ನು; ಮನುಷ್ಯನಿಗಿಂತ ಹೆಚ್ಚಾಗಿ ಪ್ರಕೃತಿ ಕೇಂದ್ರಿತ ಮನೋಭಾವನೆಯನ್ನು; ದ್ವೇಷರಹಿತ ಅಪ್ಪಟ ಮಾನವೀಯ ಅಂತಃಕರಣವನ್ನು; ವ್ಯವಹಾರಿಕವಲ್ಲದ ನಿಜವಾದ ಮಾನವೀಯ ಸಂಬಂಧದ ಬಂಧುತ್ವವನ್ನು ಇವೆಲ್ಲ ಭಾವನೆಗಳ ಮೂಸೆಯಲ್ಲಿ ಮೂಡಿ ಅನೇಕ ತಿರುವುಗಳಲ್ಲಿ ಬೆಳೆದ ಕನ್ನಡ ಜನಪದ ಸಂಸ್ಕೃತಿಯ ಪ್ರಧಾನ ಲಕ್ಷಣಗಳಲ್ಲಿ ಕೆಲವನ್ನು ಇಲ್ಲಿ ವಿವರಿಸಿಕೊಳ್ಳಬಹುದು.

### ದೇವರು–ಧರ್ಮ

'ಜನಪದ ಧರ್ಮವು ಲಿಖಿತ ಪಠ್ಯ, ಆ ಮೂಲಕ ಏರ್ಪಟ್ಟ ತಾತ್ವಿಕ ಚಿಂ  ತನೆಯ ಮೂಲಕ ಆಕಾರ ಪಡೆದುದ್ದಲ್ಲ. ಅದು ಬಹುಮಟ್ಟಿಗೆ ಅನುಕರಣೆ ಮತ್ತು ಆಚರಣೆಗಳಿಂದ ಹರಿದು ಬಂದಿದ್ದು, ಅತಿಮಾನುಷ ಕಲ್ಪನೆ, ಅಲೌಕಿಕ ಜೀವಿಗಳ ಆರಾಧನೆ ಹಾಗೂ ಅನೇಕ ಬಗೆಯ ಧಾರ್ಮಿಕ ನಂಬಿಕೆಗಳಿಂದ ಕೂಡಿದೆ'. ಇದರಲ್ಲಿ ಕಂಡು ಬರುವ ಆಚಾರ – ವಿಚಾರಗಳು, ನಡಾವಳಿಗಳು, ನಂಬಿಕೆಗಳು ಕಲೆಗಳು ಮತ್ತು ಹುಟ್ಟು–ಸಾವುಗಳ ಮಧ್ಯೆ ಅನುಸರಿಸಲೇ ಬೇಕಾದ ಸಂಪ್ರದಾಯಗಳು, ಜನರ

ಜೀವನ ವಿಧಾನ ಮತ್ತು ಅದರ ಮನೋ ದೃಷ್ಟಿಯನ್ನು ಪ್ರತಿನಿಧಿಸುತ್ತವೆ. ತಾವು ಪರಿಪಾಲಿಸುವ ಧರ್ಮಗಳ ಧ್ಯೇಯೋದ್ದೇಶಗಳ ಅರಿವಿಲ್ಲವಾದರೂ ತಮ್ಮ ಸುತ್ತ ನಮ್ಮನ್ನು ಕಾಪಾಡುವ ಒಂದು ಶಕ್ತಿಯಿದೆ ಎಂಬುದನ್ನು ಜನಪದರು ನಂಬುತ್ತಾರೆ. ಹೀಗಾಗಿ ಅವರು ನದಿ, ಜಲಪಾತಗಳು, ಬೆಟ್ಟಗುಡ್ಡಗಳು ದಟ್ಟವಾದ ಕಾಡು ಎಲ್ಲವುಗಳಲ್ಲೂ ದೈವತ್ವವನ್ನು ಅರಸುತ್ತಾರೆ. ಇವುಗಳ ಒಡೆಯನೇ ಆ ಪ್ರದೇಶದಲ್ಲಿ ವಾಸವಾಗಿದ್ದು, ಕಾಯಿಲೆ ಮತ್ತು ಅನಿಷ್ಟಗಳಿಗೆ ಆತನೇ ಕಾರಣನೆಂದು ನಂಬಿ ಅವುಗಳನ್ನು ಪೂಜಿಸುತ್ತಾರೆ. ಇಂಥ 'ಸರ್ವಚೇತನವಾದ' ವಾಸ್ತವವಾಗಿ ಜನಪದ ಧರ್ಮದ ಅಡಿಗಲ್ಲಾಗಿದೆ ಎಂದ ು ಹೇಳಬಹುದು. ಗಮನಿಸಬೇಕಾದ ಸಂಗತಿ ಎಂದರೆ ಕನ್ನಡ ನೆಲದ ಜನಪದ ಸಂಸ್ಕೃತಿಯ ಧಾರ್ಮಿಕ ಸ್ತೊತ್ರ, ಸ್ತುತಿ, ಪ್ರಾರ್ಥನೆಗಳಲ್ಲಿ ಒತ್ತಾಯದ, ಒತ್ತಡದ, ಬಲತ್ಕಾರದ ಗೇಲಿಯ ನಿಲುವು. ಜನಪದರ ಬದುಕು ರಾಜಶಕ್ತಿಗಿಂತ ಹೆಚ್ಚಾಗಿ ಧರ್ಮ ಶಕ್ತಿಯನ್ನು ಆಧರಿಸಿದೆ. ತಮ್ಮ ಜಾಯಮಾನಕ್ಕೆ ಒಗ್ಗುವ ರೀತಿಯಲ್ಲಿ ಮಾನವೀಯ ಮೌಲ್ಯಗಳಿಂದ ಕೂಡಿದ ಧರ್ಮವೊಂದನ್ನು ರೂಪಿಸಿಕೊಂಡ ಜನಪದರ ಕಲ್ಪನೆಯ ದೇವರು ಪ್ರತಿಷ್ಟಿತ ಶಕ್ತಿಗಿಂತಲೂ ತೀರಾ ಭಿನ್ನವಾದುದು. ಈ ಹಿನ್ನೆಲೆಯೊಳಗೆ ಜನಪದ ಧರ್ಮದ ವಿವಿಧ ಆಯಾಮಗಳನ್ನು ಕಾಣಬಹುದಾಗಿದ್ದು, ಅವುಗಳನ್ನು ಈ ಮುಂದಿನಂತೆ ವಿವರಿಸಿಕೊಳ್ಳಬಹುದು.

ಜನಪದರ ದೈವ ಕಲ್ಪನೆ

ಸಂಸ್ಕೃತಿಗೂ ಧರ್ಮಕ್ಕೂ ನಿಕಟ ಸಂಬಂಧವಿದೆ. ಸಂಸ್ಕೃತಿಯನ್ನು ರೂಪಿಸುವಲ್ಲಿ ಧರ್ಮದ ಪಾತ್ರ ದೊಡ್ಡದು. ಇವರ ಧರ್ಮಕ್ಕೆ ಒಬ್ಬ ಸಂಸ್ಥಾಪಕನಾಗಲಿ, ಒಂದು ಧರ್ಮಗ್ರಂಥವಾಗಲಿ ಇಲ್ಲ. ಬದಲಿಗೆ ಇಲ್ಲಿ ಎಲ್ಲರೂ ಸಂಸ್ಥಾಪಕ ವಾರಸುದಾರರೆ ಆಗಿರುತ್ತಾರೆ. ಹಾಗೂ ಬದುಕಿನ ಅನುಭವಗಳ ಮೂಲಕ ರೂಪುಗೊಂಡ ನಂಬಿಕೆ, ಸಂಪ್ರದಾಯ ಆಚರಣೆ ಮತ್ತು ಕಲ್ಪನೆಗಳೇ ಇವರ ಧರ್ಮ ಗ್ರಂಥಗಳು. ಇವು ಶಿಷ್ಟಧಾರೆಯ ಧರ್ಮಗ್ರಂಥಗಳಂತೆ ಜಡವಾದವುಗಳಲ್ಲ. ಬದಲಿಗೆ ಅಲಿಖಿತವೂ ಪರಿವರ್ತನಾ ಶೀಲವೂ ಆಗಿರುತ್ತವೆ. ಕನ್ನಡ ಜನಪದ ಲೋಕದಲ್ಲಿ ಕಂಡು ಬರುವ ದೇವರ ಕಲ್ಪನೆಗಳನ್ನು ಈ ಮುಂದಿನಂತೆ ಕಾಣಬಹುದು.

ಪ್ರಕೃತಿ ಆರಾಧನೆ 'ಪ್ರಕೃತಿ ಪೂಜೆ ಜನಪದ ಧರ್ಮದ ಪ್ರಧಾನ ಲಕ್ಷಣ. ತಾವು ವಾಸಿಸುವ ಭೂಮಿ, ಸಮೀಪದ ಕಡಲು, ಶಾಖ ಮತ್ತು ಬೆಳಕನ್ನು ನೀಡುವ ಸೂರ್ಯ–ಚಂದ್ರ, ವಿವಿಧ ಉಪಯೋಗಗಳಿಗೆ ಬರುವ ಮರ–ಗಿಡ–ಬಳ್ಳಿಗಳು ಇದರ ಆರಾಧ್ಯ ದೈವಗಳು. ಜನಪದರ ಪ್ರಕೃತಿಯ ಪೂಜೆಯ ಹಿಂದೆ ಕೃತಜ್ಞತೆಯ ಭಾವನೆಯಿದೆ. ಪ್ರಕೃತಿಯನ್ನು ಅವಲಂಬಿಸಿ ಬದುಕಿದ ಮನುಷ್ಯನಿಗೆ ಅದರ ಒಡನಾಟದಲ್ಲಿ ಆದ ನೋವು –ನಲಿವು ದೈವ ಸ್ವರೂಪವನ್ನು ಕಂಡಿವೆ. ಮುಖ್ಯವಾಗಿ ಪ್ರಕೃತಿಯಲ್ಲಿನ ಭಯ ಹುಟ್ಟಿಸುವ ವಸ್ತು–ವಿಷಯಗಳನ್ನು; ವಿಸ್ಮಯ ಮೂಡಿಸಿದ ಘಟನೆಗಳನ್ನು ದೇವರೆಂದು ಆರಾಧಿಸಿದ ಪರಿಶ್ರಮ ಇಲ್ಲಿದೆ.

ಜನಪದರ ದೈವ ಕಲ್ಪನೆ ಅತ್ಯಂತ ಕುತೂಹಲಕಾರಿಯಾದುದು. ಕುಟುಂಬದ, ಜಾತಿಯ ಹಾಗೂ ಸಮುದಾಯದ ಉದ್ಧಾರಕ್ಕೆ ದುಡಿದ ಹಿರಿಯರೇ ಇಲ್ಲಿನ ದೇವರು. ಸಾಂಸ್ಕೃತಿಕ ವೀರರು ಎನ್ನುವ ಹೆಸರಿನಲ್ಲಿ ಕರೆಯಲ್ಪಡುವ ಈ ವ್ಯಕ್ತಿಗಳು ಸಮೂಹದ ಪರವಾದ ಕೆಲಸ–ಕಾರ್ಯಗಳ ಮೂಲಕ ಗಮನ ಸೆಳೆದು ಪೂಜನೀಯರಾಗಿರುತ್ತಾರೆ. ಕನ್ನಡ ನಾಡಿನಲ್ಲಿ ಇಂಥ ಸಾವಿರಾರು ಜನ ಸಾಂಸ್ಕೃತಿಕ ವೀರರು ಬಾಳಿ ಬದುಕಿದ್ದನ್ನು ಕಾಣಬಹುದು. ಅದರಲ್ಲಿ ಮುಖ್ಯವಾಗಿ ಮಲೆಯಮಾದೇಶ್ವರ, ಮಂಟೇಸ್ವಾಮಿ, ಜುಂಜಪ್ಪ, ಮೈದಾರಲಿಂಗ ಗಾದ್ರಿ ಪಾಲನಾಯಕ, ಕುಮಾರರಾಮ, ಸೇವಾಲಾಲ ಇಂಥ ಕೆಲವೇ ಕೆಲವರು ಮಾತ್ರ ನಮ್ಮ ಲಕ್ಷ್ಯದಲ್ಲಿದ್ದಾರೆ. ಇವರಲ್ಲದೆ ಇನ್ನು ನೂರಾರು ಜನ ಸಾಂಸ್ಕೃತಿಕ ವೀರರ ಕಥನಗಳು ಮತ್ತು ಆಚರಣೆಗಳು ನಮ್ಮ ಸಾಂಸ್ಕೃತಿಕ ಪರಂಪರೆಯೊಳಗೆ ಪ್ರಚಲಿತದಲ್ಲಿವೆ. ಈ ಮಟ್ಟದ ನಾಯಕರಲ್ಲದೆ ಪ್ರತೀ ಬಳಿ, ಕುಟುಂಬಕ್ಕೂ ಹಿರಿಯರ ಪರಂಪರೆ ಇದ್ದು ಅವರು ತಾತ, ತಂದೆ, ಮೊದಲಾದ ನೆಲೆಗಳಲ್ಲಿ ದುಡಿದು ಶ್ರೇಷ್ಠರಾದ ಪೂಜನೀಯರಾಗಿದ್ದಾರೆ. ಇಲ್ಲಿ

ಗಮನಿಸಬೇಕಾದ ಸಂಗತಿ ಎಂದರೆ. ಕುಟುಂಬ, ಸಮುದಾಯಗಳ ಹಿರಿಯನ್ನು ಪೂಜೆ ಮಾಡುವ ಕ್ರಮಗಳು ವಿಭಿನ್ನ. ಉದಾ: ಹಿರಿಯರ ಪ್ರತಿನಿಧಿಯಾಗಿ ಕಲ್ಲು, ಕೋಲು, ಮಗೆ ಮೊದಲಾದ ವಸ್ತುಗಳನ್ನು ವ್ಯಕ್ತಿಗಳೆಂದು ಪರಿಭಾವಿಸಿ ಪೂಜಿಸಲಾಗುತ್ತದೆ. ಇತ್ತೀಚೆಗೆ ಛಾಯಾಚಿತ್ರಗಳ ರೂಪದಲ್ಲಿ ಪೂಜಿಸುವ ಪದ್ಧತಿಗಳು ಚಾಲ್ತಿಗೆ ಬರುತ್ತಿವೆ.

ಜನಪದ ದೈವ ಕಲ್ಪನೆಯ ಚರಿತ್ರೆಯಲ್ಲಿ ಮೊದಲ ಹೆಜ್ಜೆ ಎಂದರೆ ಪ್ರಕೃತಿಯ ಭಯ–ವಿಸ್ಮಯಗಳನ್ನು ಅನುಸಂಧಾನಗೊಳಿಸಿದ ಕ್ರಮ. ಮುಖ್ಯವಾಗಿ ಪ್ರಕೃತಿಯ ಜೊತೆ ನಡೆಸಿದ – ಬೆಳೆಸಿದ ಸಂಬಂಧಗಳ ಸ್ವರೂಪದಲ್ಲಿ ಜನಪದರ ದೈವ ಕಲ್ಪನೆ ಒಡಮೂಡಿದೆ. ಮನುಷ್ಯ ಹಾಗೂ ಪ್ರಕೃತಿಯ ಸಂಬಂಧಗಳು ಅತ್ಯಂತ ಪ್ರಾಚೀನವೂ ನಿರಂತವೂ ಆಗಿವೆ. ಈ ನಿಡುಗಾಲದ ನಡಿಗೆಯಲ್ಲಿ ಮನುಷ್ಯ ಪ್ರಕೃತಿಯ ಬಗ್ಗೆ ವಿಸ್ಮಯ – ಭಯ – ಕೃತಜ್ಞತೆಯ ಭಾವನೆಗಳನ್ನು ಹೊಂದಿದ್ದಾನೆ. ಹಾಗಾಗಿಯೇ ಪ್ರಕೃತಿಯನ್ನು ಮನಸಾರೆ ಆರಾಧಿಸಿದ್ದಾನೆ. ಪ್ರಕೃತಿಯ ಭಾಗವಾದ ಸೂರ್ಯ–ಚಂದ್ರ–ಭೂಮಿ–ಆಕಾಶ, ನೀರು–ಗಾಳಿ, ಮಳೆ–ಬೆಳೆ ಇವುಗಳನ್ನು ಜನಪದರು ದೇವರೆಂದು ಪೂಜಿಸಿದ್ದಾರೆ. ಅದರಲ್ಲೂ 'ಭೂಮಿ' ಮಣ್ಣಿಗೆ ಹತ್ತಿರವಾಗಿ ಬದುಕಿದ ಜನಪದ ಸಮುದಾಯಗಳಿಗೆ ಶ್ರೇಷ್ಠ ದೈವ. ಹಾಗಾಗಿ ಜನಪದ ತ್ರಿಪದಿಯೊಂದು ಭೂಮಿ ತಾಯಿಗೆ ಎಂಥ ಸ್ಥಾನವಿದೆ ಎಂಬುದನ್ನು ಹೀಗೆ ಸ್ಪಷ್ಟಪಡಿಸುತ್ತದೆ.

ಬೆಳಗಾಗಿ ನಾನೆದ್ದು ಯಾರ್ಯಾರ ನೆನೆಯಲಿ।
ಎಳ್ಳು ಜೀರಿಗೆ ಬೆಳೆವಂಥ। ಭೂಮಿ ತಾಯಿನ।
ಎದ್ದೊಂದು ಗಳಿಗೆ ನೆನೆದೇನ॥

ಈ ಸಾಲುಗಳು, ಇರುವ ಅನಂತ ದೈವಗಳ ನಡುವೆ ಭೂಮಿ ತಾಯಿ ದೊಡ್ಡವಳು ಹಾಗಾಗಿಯೇ ಅವಳಿಗೆ ಮೊದಲ ಸ್ಥಾನ ಎಂಬುದನ್ನು ಸ್ಪಷ್ಟಪಡಿಸುತ್ತವೆ. ಹೀಗೆ ಭೂಮಿಯನ್ನು ತಾಯಿಯೆಂದು ತಿಳಿದ. ಸಮುದಾಯಗಳ ಪ್ರಜ್ಞೆ ಅನುಭವಜನ್ಯವಾದುದು ಹುಟ್ಟಿನಿಂದ ಸಾವಿನವರೆಗೂ ಮನುಷ್ಯ ಭೂಮಿಯಿಂದ ಪಡೆಯುವ ಸಹಾಯವೆಷ್ಟು? ಆದರೆ ಇತ್ತೀಚಿನ ದಿನಮಾನದಲ್ಲಿ ಭೂಮಿಯ ಗರ್ಭವನ್ನು ಬಸಿದ ಆಧುನಿಕರ ಜ್ಞಾನ ಯಾಕಾಗಿ ಪರಂಪರೆಯನ್ನು ನಿಲಕ್ಷಿಸಿತು ಎಂಬುದರ ಬಗ್ಗೆ ಆಲೋಚಿಸಬೇಕಿದೆ. ಭೂಮಿಯಂತೆ ಸೂರ್ಯ, ಚಂದ್ರ ನೀರು, ಗಾಳಿ ಮಳೆ ಮೊದಲಾದವು ಮನುಷ್ಯನ ಬದುಕಿಗೆ ಅನಿವಾರ್ಯ ಎಂಬುವ, ಅವು ನೀಡಿದ ಸಹಕಾರಕ್ಕೆ ಪ್ರತಿಯಾಗಿ ಗೌರವಿಸುವ ಮನೋಭಾವದಿಂದಾಗಿ ಇವೆಲ್ಲವೂ ದೈವ ಸ್ವರೂಪಿಯಾಗಿವೆ. ಜನಪದ ಬದುಕುಗಳಲ್ಲಿ ದೊರೆಯುವ ಪ್ರಕೃತಿ ಆರಾಧನೆಯ ಮತ್ತೊಂದು ರೂಪ ಹೊಸ ಗಿಡ–ಮರ–ಬಳ್ಳಿಗಳ ಆರಾಧನೆ. ಇದನ್ನು ಕುಲದೇವತಾರಾಧನೆ ಪದ್ಧತಿ ಎಂದು ಕರೆಯಲಾಗಿದೆ. ಈ ಪದ್ಧತಿಯ ಅನ್ವಯ 'ಒಂದು ಸಮುದಾಯದ ಜನ ತಮ್ಮ ಕುಲದ ಮೂಲವನ್ನು ಒಂದು ಸಸ್ಯ ಅಥವಾ ಪ್ರಾಣಿಗಳಲ್ಲಿ ಆರೋಪಿಸಿಕೊಂಡು ಅವುಗಳನ್ನೇ ತಮ್ಮ ಕುಲದೇವರು ಎಂದು ಆರಾಧಿಸಿಕೊಂಡು ಬರುತ್ತಾರೆ. ತಮ್ಮ ಕುಲದೇವತೆಯ ಲಾಂಛನವಾದ ಸಸ್ಯವನ್ನು ಅವರು ಕಡಿಯುವುದಿಲ್ಲ. ಪ್ರಾಣಿಯನ್ನು ಬೇಟೆಯಾಡುವುದಿಲ್ಲ ಹಾಗೂ ಆಹಾರದಲ್ಲಿ ಸೇವಿಸುವುದಿಲ್ಲ. ಈ ಸಮುದಾಯಗಳು ಪೂಜಿಸುವ ಬನ್ನಿ, ಬೇವು, ಆಲ, ಎಕ್ಕೆ ಮೊದಲಾದವು ಕೇವಲ ಹಸಿರಲ್ಲ. ಅವುಗಳಲ್ಲಿರುವ ಔಷಧೀಯ ಗುಣವೇ ಅವುಗಳನ್ನು ಪೂಜೆಗೊಳ್ಳುವಂತೆ ಮಾಡಿದೆ. ಇಂಥಲ್ಲಿ ಮನುಷ್ಯನ ಆರೋಗ್ಯಕ್ಕೆ ಸಹಕರಿಸಿದಕ್ಕೆ ಪ್ರತಿಯಾಗಿ ಮೂಡಿದ ಕೃತಜ್ಞತಾ ಭಾವವೇ ಅವುಗಳ ಆರಾಧನೆಗೆ ಪ್ರಮುಖ ಕಾರಣವಾಗಿದೆ. ಈ ರೀತಿಯಲ್ಲಿ ಪ್ರಕೃತಿ ಮನುಷ್ಯನ ಬದುಕಿಗೆ ಅನುಕೂಲಗಳಾಗಿ ಒದಗಿಬಂದ ವಸ್ತು–ವಿಷಯಗಳನ್ನು ಗೌರವ ಮತ್ತು ಕೃತಜ್ಞತೆ ಸೂಚಿಸುವ ಸಲುವಾಗಿ ಪೂಜಿಸಿದರೆ; ಇದೇ ಮನುಷ್ಯ ಮತ್ತೊಂದು ಕಡೆ ಪ್ರಕೃತಿಯ ವಿನಾಶಿ ರೂಪಗಳನ್ನು ಪೂಜಿಸಿದ್ದಾನೆ. ಉದಾ: ಪ್ರಕೃತಿಯಲ್ಲಿರುವ ಕ್ರೂರ ಪ್ರಾಣಿಗಳು, ವಿಷಜಂತುಗಳು; ಗುಡುಗು–ಸಿಡಿಲು ಮೊದಲಾದ ಭಯವನ್ನುಂಟು ಮಾಡುವ ಪ್ರಕೃತಿಯ ವೈಚಿತ್ರಗಳು

ಗಮನಿಸಬೇಕಾದ ಸಂಗತಿ ಎಂದರೆ ಕೃತಜ್ಞತಾ ಭಾವನೆಯ ಪೂಜಾಕ್ರಮಗಳಿಗಿಂತ ಭಯದ ಭಾವನೆಯಲ್ಲಿ ಪೂಜಿಸುವ ಪೂಜಾಮಾದರಿಗಳು ಭಿನ್ನವಾಗಿವೆ.

ಜನಪದ ಧರ್ಮದ ಪ್ರಕೃತಿ ಆರಾಧನೆಯ ಭಾಗವಾಗಿ ಗಮನಿಸಬೇಕಾದ ಮತ್ತೊಂದು ಸಂಗತಿ ಎಂದರೆ ತನ್ನ ಬದುಕಿಗೆ ಸಹಕರಿಸದ ಸೂರ್ಯ–ಚಂದ್ರ–ಭೂಮಿ; ಭಯವನ್ನುಂಟು ಮಾಡಿದ ಹಲವಾರು ವಿಕೋಪಗಳು ಇಂಥ ಮಹಾನ್ ಸಂಗತಿಗಳಲ್ಲದೆ ಕೃಷಿ ಮೊದಲಾದ ವಿವಿಧ ವೃತ್ತಿಯ ಜನ ಬಳಸುವ ಸಣ್ಣ ಸಣ್ಣ ಸಲಕರಣೆಗಳು ಕೂಡ ಪೂಜನೀಯವಾಗಿದೆ. ನೇಗಿಲು ರಂಟೆ, ಕುಂಟೆ, ಕುಡ ಮೊದಲಾದ ವಸ್ತುಗಳಿಲ್ಲದ ರೈತ; ಕೋಲು, ಮಗೆಗಳಿಲ್ಲದ ಪುಶುಪಾಲಕ; ಉಳಿ, ಬೈರಿಗೆ, ಬಾಚಿ ಇಲ್ಲದ ಬಡಗಿ; ತಿಡಿ, ಬೆಂಕಿ, ಚಮ್ಮಟಿಗೆ ಇಲ್ಲದ ಕಮ್ಮಾರ; ಮೊರ ಕಸಬರಿಗೆ ಹೊಂದಿಲ್ಲದ ಕುಟುಂಬದ ಮಹಿಳೆಯರ ಕಾಯಕ ಅದೆಷ್ಟು ಕಷ್ಟಕರ ಎಂಬುದನ್ನು ಅರಿತರೆ ಇಲ್ಲಿನ ದೈವಾರಾಧನೆಯ ಸ್ವರೂಪದ ಹಿನ್ನೆಲೆ ಅರ್ಥವಾಗುತ್ತದೆ.

ಕನ್ನಡ ಜನಪದ ಜೀವನದೊಳಗೆ ರೂಪುಗೊಂಡ ದೈವ ಕಲ್ಪನೆಗಳಲ್ಲಿ ಇನ್ನೂ ಕೆಲವು ಕುತೂಹಲ ಮೂಡಿಸುವ ವಿಚಾರಗಳಿವೆ. ಅಂಥವುಗಳಲ್ಲಿ ಪ್ರಧಾನವಾಗಿ ಗಮನಿಸಬೇಕಾದ ಸಂಗತಿ ಎಂದರೆ – ದೇವರುಗಳು ಕೂಡ ಮನುಷ್ಯನಂತೆ ಲೌಕಿಕ ಭಾವನೆಗಳನ್ನು ಹೊಂದಿವೆ. ಈ ಜನ ದೇವರಲ್ಲಿ ಮಾಡಿಕೊಳ್ಳುವ ಹರಕೆಯ ಸ್ವರೂಪಗಳು, ನಡೆಸುವ ಪೂಜಾವಿಧಾನಗಳು, ಬಳಸುವ ಪೂಜಾ ಸಾಮಗ್ರಿಗಳು ಇವೇ ಮೊದಲಾದ ಸಂಗತಿಗಳನ್ನು ಗಮನಿಸಿದರೆ ಮೇಲಿನ ಸಂಗತಿ ಸ್ಪಷ್ಟವಾಗುತ್ತದೆ. ಅಷ್ಟೆ ಅಲ್ಲದೆ ಮನುಷ್ಯರಂತೆಯೇ ದೇವರುಗಳ ನಡುವೆ ಮಾನವೀಯ ಸಂಬಂಧಗಳು, ರಕ್ತ ಸಂಬಂಧದ ನೆಲೆಗಳು ಇರುತ್ತವೆ. ಸಾಮಾನ್ಯವಾಗಿ ದೇವರುಗಳ ಮಧ್ಯೆ ಗಂಡ–ಹೆಂಡತಿ, ಅಣ್ಣ–ತಮ್ಮ, ಅಣ್ಣ–ತಂಗಿ, ಅಕ್ಕ–ತಮ್ಮ ಸಂಬಂಧಗಳನ್ನು ಕಲ್ಪಿಸಿರುವುದು ಕಂಡುಬರುತ್ತದೆ. ಇಲ್ಲಿಯೇ ಗಮನಿಸಬೇಕಾದ ಅಂಶವೆಂದರೆ ಈ ವ್ಯವಸ್ಥೆಯಲ್ಲಿ ದೈವ ಮತ್ತು ಭಕ್ತರ ನಡುವೆ ಈ ಮೊದಲು ಪ್ರಸ್ತಾಪಿಸಿದಂತೆ ಸ್ತೊತ್ರ, ಸ್ತುತಿ, ಪ್ರಾರ್ಥನೆಗಳ ನಿಲುವಿನ ಸಂಬಂಧವಿಲ್ಲ. ಬದಲಿಗೆ ಒತ್ತಾಯದ, ಒತ್ತಡದ ಬಲತ್ಕಾರದ ಗೇಲಿಯ ಮನೋಭಾವದ ಸಂಬಂಧವಿದೆ. ವಿಶೇಷವೆಂದರೆ ಇಂಥ ವ್ಯವಸ್ಥೆಯಲ್ಲಿ ದೈವ ಮತ್ತು ಭಕ್ತರ ನಡುವೆ ಅರಸ–ಆಳು ರೀತಿಯ ಸಂಬಂಧಗಳಿರುವುದಿಲ್ಲ. ಅದಕ್ಕಾಗಿಯೇ ಇಲ್ಲಿ ಬಂಧುತ್ವ, ಸ್ನೇಹ ರೀತಿಯ ನಂಟು ಕಂಡುಬರುತ್ತದೆ. ಹಾಗಾಗಿಯೇ ಜನಪದರು ದೇವರಲ್ಲಿ ವರವನ್ನು ಬೇಡಿ ಪಡೆಯುವುದಕ್ಕಿಂತ ಒತ್ತಾಯಮಾಡಿ, ಬೈದು ವರಪಡೆಯುವ ಕ್ರಮಗಳೇ ಹೆಚ್ಚು. ಈ ದೈವ ವ್ಯವಸ್ಥೆಯಲ್ಲಿ ಪುರೋಹಿತಶಾಹಿಯ ಪ್ರವೇಶವಿಲ್ಲ. ದೇವರು ಮತ್ತು ಭಕ್ತರ ನಡುವೆ ಪೂಜಾರಿಯ ಕೆಲಸವೇನು? ಎಂಬುದನ್ನು ಜನಪದ ಗರತಿಯೊಬ್ಬಳು ಹೀಗೆ ಪ್ರಶ್ನಿಸುತ್ತಾಳೆ.

ದೇವರಿಗೆ ಬಂದೀನಿ ದಾರಿ ಬಿಡು ಪೂಜಾರಿ।
ದೇವರಿಗೆ ನನಗೆ ಒಳಮಾತ । ಮೈಲಾರ ಲಿಂಗನ।
ಠಾವಿಗೋಗಿ ಕೈಯ ಮುಗಿದೇನ॥

ಕನ್ನಡ ಜನಪದ ಲೋಕದೊಳಗೆ ಇಂಥ ವಿಶಿಷ್ಟವೂ ವೈವಿದ್ಯಮಯವೂ ಆದ ದೈವ ಪರಂಪರೆಯಿದೆ. ಈ ಪರಂಪರೆಯೊಳಗೆ ದೈವ ಎನ್ನುವುದು ಮನುಷ್ಯರ ಸಂಕಷ್ಟಗಳ ಪರಿಹಾರಕ. ಆದರೆ ಇದೇ ನೆಲದಲ್ಲಿ ಇಂದು ಪ್ರಚಲಿತವಿರುವ ದೈವ ಕಲ್ಪನೆಗಳನ್ನು ಕಂಡರೆ ಯಾರಿಗಾದರೂ ಬೇಸರವೆನಿಸುತ್ತದೆ. ವೈಧಿಕ ಪರಂಪರೆಯ ದೈವ ಸ್ವರೂಪಗಳು ಜನಪದ ದೈವ ಸ್ವರೂಪದ ಮೇಲೆ ನಿರಂತರವಾಗಿ ನಡೆಸುತ್ತಾ ಬಂದಿರುವ ದಾಳಿಗಳ ಕಾರಣದಿಂದ ಇಂದು ದೇವರ ಹೆಸರಲ್ಲಿ ಹೊಟ್ಟೆಹೊರೆಯುವವರ ಸಂಖ್ಯೆ ಜಾಸ್ತಿಯಾಗಿದೆ. ಇಂಥವರಿಂದ ಭಕ್ತರ ಶೋಷಣೆ ಹೆಚ್ಚು ಹೆಚ್ಚು ನಡೆದಿದೆ. ಆಧುನಿಕ ಸಮಾಜದ ವಿಜ್ಞಾನದ ವಿಚಾರಗಳು ದೈವ ಕಲ್ಪನೆಯನ್ನು ಸಡಿಲಗೊಳಿಸಿದರ ಪರಿಣಾಮ ಇದರ ಫಲ ಪಡೆದ ಜನ ದೈವಗಳನ್ನೆ ಶೋಷಿಸುವ ಮಟ್ಟಕ್ಕಿಳಿದ್ದಿದ್ದಾರೆ. ದೇವರ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ದೇವಾಲಯ ಹಾಗೂ ಮಠಗಳು ಕೂಡ

ಹಣ–ಆಸ್ತಿ ಗಳಿಕೆಯಲ್ಲಿ ಪೈಪೋಟಿ ನಡೆಸುತ್ತಿರುವುದು ನಮ್ಮ ಕಾಲದ ದುರಂತ. ಇಂಥ ಸಂದರ್ಭದೊಳಗೆ ನಿಜವಾದ ಭಕ್ತಿಯುಳ್ಳ ಯಾರನ್ನು ಹಿಂಸಿಸದ, ನಿಜವಾದ ಮಾನವ ಪ್ರೇಮವನ್ನು ಕಾಪಿಡುವ ಜನಪದರ ದೈವ ವ್ಯವಸ್ಥೆ ಇಂದು ನಮ್ಮೆಲ್ಲರ ಅಗತ್ಯವಾಗಿದೆ.

**ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳು**

ನಂಬಿಕೆ–ಸಂಪ್ರದಾಯ–ಆಚರಣೆಗಳು ಜನಪದ ಧರ್ಮದ ಧರ್ಮಗ್ರಂಥಗಳು ಇವುಗಳಿಂದ ಧರ್ಮಗಳು ರೂಪುಗಳನ್ನು ಪಡೆಯುತ್ತವೆ ಮತ್ತು ಮುನ್ನಡೆಯುತ್ತವೆ. ಈ ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳ ಅಂತರ್ ಸಂಬಂಧವನ್ನು ಒಂದು ಸೂತ್ರದಲ್ಲಿ ಹಿಡಿದಿಡುವುದಾದರೆ ಕರ್ನಾಟಕ ಅನೇಕ ಜಿಲ್ಲೆಗಳಲ್ಲಿ ಮದುವೆಯಾಗದ ಮದುವೆಯಾದರೂ ಮಕ್ಕಳಾಗದ ಹೆಂಗಸು ಕೊಂತಿಪೂಜೆ ಮಾಡಿದರೆ ದೋಷ ಪರಿಹಾರವಾಗುತ್ತದೆ ಎಂಬುದು ನಂಬಿಕೆ. ಮಹಿಳೆಯರು ತಮ್ಮ ಮನೆಯಲ್ಲಿ ಎರೆಮಣ್ಣು ಅಥವಾ ಗೋವಿನ ಸಗಣಿಯಿಂದ ಮಂಡಲವನ್ನು ಬಿಡಿಸಿ ಎರೆಮಣ್ಣಿನಿಂದಲೇ ಸುಂದರವಾದ ಸ್ತ್ರೀ ವಿಗ್ರಹವನ್ನು ಮಾಡಿ ಹದಿನಾರು ದಿನಗಳ ಕಲ ಕೊಂತಿಯ ಹಾಡುಗಳನ್ನು ಹಾಡುತ್ತಾ ಪೂಜೆ ಸಲ್ಲಿಸಬೇಕು ಎಂಬುದು ಸಂಪ್ರದಾಯ ಮಂಡಲವನ್ನು ಹೇಗೆ ಬರೆಯಬೇಕು, ಯಾವ ಹಾಡುಗಳನ್ನು ಹಾಡಬೇಕು, ಪೂಜೆ ಹೇಗೆ ಮಾಡಬೇಕು ಎಂಬುದು ಆಚರಣೆ.

ನಂಬಿಕೆಗಳು

ಸಾಂಪ್ರದಾಯಿಕವಾಗಿ ಅಂಗೀಕೃತವಾದ ಒಂದು ತಿಳುವಳಿಕೆಯನ್ನು ನಂಬಿಕೆ ಎನ್ನಬಹುದು. ನಂಬಿಕೆಗಳು ಹುಟ್ಟುತ್ತಲೇ ನಂಬಿಕೆಗಳಾಗಿ ಹುಟ್ಟುವುದಿಲ್ಲ ಯಾವುದೋ ಒಂದು ಅನುಭವದ ಹಿನ್ನೆಲೆಯಲ್ಲಿ ಮೂಡಿ ಬಂದ ಜ್ಞಾನವೇ ಹೇಳಿಕೆಯ ರೂಪ ಪಡೆದುಕೊಂಡು ಪರಂಪರೆಯಲ್ಲಿ ನಂಬಿಕೆಗಳಾಗಿ ರೂಪುಗೊಂಡಿರುತ್ತವೆ. ಕನ್ನಡ ಜನಪದ ಸಮುದಾಯಗಳಲ್ಲಿ ಕಂಡು ಬರುವ ಅನೇಕ ನಂಬಿಕೆಗಳು ಕಾಲಾಂತರದ ಸಾಂಸ್ಕೃತಿಕ ಪಲ್ಲಟಗಳಿಂದಾಗಿ ಕೆಲವು ಅರ್ಥ ಕಳೆದುಕೊಂಡಿರುವುದು ಸುಳ್ಳೇನು ಅಲ್ಲ. ಆದರೆ ಇದನ್ನೆ ನೆಲೆಯಾಗಿಸಿಕೊಂಡ ಆಧುನಿಕ ಚಿಂತನೆಗಳು ಜನಪದ ನಂಬಿಕೆಗಳನ್ನೆಲ್ಲ ಮೂಢನಂಬಿಕೆಗಳು ಎನ್ನುವ ಹಣೆಪಟ್ಟಿಯೊಂದಿಗೆ ಮೂಲೆಗುಂಪಾಗಿಸಿವೆ. ಇದು ಸರಿಯಾದ ಕ್ರಮವಲ್ಲ. ಪ್ರತೀ ನಂಬಿಕೆಯ ಹಿಂದೆ ಒಂದು ಸತ್ಯಾಂಶವಿರುತ್ತದೆ.

ರಾತ್ರಿ ಹೊತ್ತು ಕಸವನ್ನು ಹೊರಗೆ ಚೆಲ್ಲಬಾರದು
ಬನ್ನಿ–ಬೇವಿನ ಮರಗಳನ್ನು ಪೂಜಿಸುವುದು ಮನುಷ್ಯರಿಗೆ ಶ್ರೇಯಸ್ಕರ
ಹುತ್ತವನ್ನು ಸುತ್ತಬಾರದು
ನಾಯಿಯನ್ನು ತುಳಿಯಬಾರದು

ಇಂಥ ಅನೇಕ ನಂಬಿಕೆಗಳನ್ನು ಮೂಢ ನಂಬಿಕೆಗಳೆಂದು ತಿರಸ್ಕರಿಸುವುದು ಹೇಗೆ? ಹಾಗೆ ನೋಡಿದರೆ ಮಾನವ ತನ್ನ ಬದುಕಿನಲ್ಲಿ ಒದಗಿ ಬಂದ ಅನುಭವ ಜನ್ಯವಾದವು ಈ ನಂಬಿಕೆಗಳು.

ಸಂಪ್ರದಾಯಗಳು

ನಂಬಿಕೆಯೊಂದು ಐತಿಹ್ಯ–ಪುರಾಣ–ಧರ್ಮಗಳ ಸಂಬಂಧವನ್ನು ಪಡೆದುಕೊಂಡು ಸಮುದಾಯದ ಶ್ರದ್ಧೆಯೊಂದಿಗೆ ಸಮರ್ಥನೆಯನ್ನು ಪಡೆದುಕೊಂಡಾಗ ಅದು ಸಂಪ್ರದಾಯವಾಗುತ್ತದೆ. ಇಂಥ ಸಂಪ್ರದಾಯಗಳು ಪ್ರತಿಯೊಂದು ಪ್ರದೇಶ ಹಾಗೂ ಸಮುದಾಯಗಳ ಅಗತ್ಯಕ್ಕೆ ಅನುಗುಣವಾಗಿ ಚಾಲ್ತಿಗೆ ಬರುತ್ತವೆ. ಈ ಹಿನ್ನೆಲೆಯಲ್ಲಿ ಕನ್ನಡ ಜಾನಪದ ಜೀವನದ ಒಡಲಾಳದಲ್ಲಿ ಸಾವಿರಾರು ಸಂಪ್ರದಾಯಗಳಿವೆ. ಇವೆಲ್ಲವೂ ಮಾನವ ಪರವಾದ ವಿಚಾರಗಳು ಎಂಬುದನ್ನು ಗಮನಿಸಬೇಕು. ಸಂಪ್ರದಾಯಗಳ ಹಿಂದಿರುವ ಜ್ಞಾನ ಹಾಗೂ ಅಲ್ಲಿ ಬಳಕೆಗೊಳ್ಳುವ ವಸ್ತುಗಳು ಅತ್ಯಂತ ಕುತೂಹಲ ಕಾರಿಯಾಗಿದ್ದು ಅನಂತರದ ದಿನಗಳಲ್ಲಿ ಅವು ಕೇವಲ ಅನುಕರಣೆಯ ಮೇಲು ನೋಟದ ಅರ್ಥಗಳಿಗೆ ಸೀಮಿತಗೊಂಡಿವೆ.

ಉದಾ: ಹಿಂದೆ ಅಪರೂಪಕ್ಕೆ ಈಗಲೂ ವಿಶೇಷ ದಿನಗಳಲ್ಲಿ ವಾಸದ ಮನೆಗಳಿಗೆ ಮಾವು–ಬೇವಿನ ಎಲೆಗಳ ತೋರಣ ಕಟ್ಟುವುದು ಸಂಪ್ರದಾಯ. ಈ ಪದ್ಧತಿ ಆಧುನಿಕ ಕಾಲದಲ್ಲಿ ಬದಲಾವಣೆಗೊಂಡು ಸಹಜವಾದ ಹಸಿರು ಎಲೆಗಳ ಬದಲಿಗೆ ಪ್ಲಾಸ್ಟಿಕ್ ಎಲೆಗಳನ್ನು ಕಟ್ಟುವ ಸಂಪ್ರದಾಯಗಳನ್ನು ಕಂಡರೆ ಇದು ಸ್ಪಷ್ಟವಾಗುತ್ತದೆ.

ಸಂಪ್ರದಾಯಗಳು ಮನುಷ್ಯನ ಜೀವನಾವರ್ತದ ಸಂಗತಿಗಳಾದ ಹುಟ್ಟು–ಮದುವೆ–ಸಾವು ಇವೇ ಮೊದಲಾದ ಸಂದರ್ಭಗಳಲ್ಲಿ ಅವರವರ ಲೋಕದೃಷ್ಟಿಗೆ ಅನುಗುಣವಾಗಿ ರೂಪುಗೊಂಡಿದೆ. ಇನ್ನೂ ವೃತ್ತಿಯಾಧಾರಿತ ಸಂಪ್ರದಾಯಗಳೂ ಇವೆ. ಕೃಷಿ, ಬೇಟೆ ಮತ್ತಿತರ ವೃತ್ತಿಯ ಜನ ತಮ್ಮ ಅನುಭವದ ಆಧಾರದ ಮೇಲೆ ಸಂಪ್ರದಾಯಗಳನ್ನು ಸೃಷ್ಟಿಸಿಕೊಂಡಿದ್ದಾರೆ. ಈ ಎಲ್ಲಾ ಸಂಪ್ರದಾಯಗಳು ಅರ್ಥಪೂರ್ಣ ಎನ್ನಲಾಗದಿದ್ದರೂ ರೈತ ಕೀಟನಾಶಕವಾಗಿ ಚರಗ ಚೆಲ್ಲುವ ಸಂಪ್ರದಾಯ ಮಾಡುವುದನ್ನು, ಬೇಟೆಗಾಗಿ ಬೇಟೆಗಾರ ಕಾಡಿನ ಮಧ್ಯೆ ನಡೆಸುವ ಆಚರಣೆಗಳು ಕೊನೆಗೆ ಆಕಾಶಕ್ಕೆ ಗುಂಡು ಆರಿಸುವ ಸಂಪ್ರದಾಯಗಳನ್ನು ತಿರಸ್ಕರಿಸಲಾಗುವುದಿಲ್ಲ.

ಆಚರಣೆಗಳು

ಸಂಪ್ರದಾಯಗಳ ಪ್ರಾಯೋಗಿಕ ಅಥವಾ ಕ್ರಿಯಾರೂಪಗಳೇ ಆಚರೆಗಳು ಹೀಗಾಗಿಯೇ ನಂಬಿಕೆಗಿಂತ ಸಂಪ್ರದಾಯಗಳಿಂದ ಆಚರಣೆಗಳ ವ್ಯಾಪ್ತಿ ದೊಡ್ಡದು. ಆಚರಣೆಗಳ ಪ್ರಮುಖ ಲಕ್ಷಣಗಳೆಂದರೆ ಅವು ಧಾರ್ಮಿಕ ಮತ್ತು ದೈವಿಕ ಸಂಸ್ಪರ್ಶವನ್ನು ಪಡೆದಿರುತ್ತವೆ. ಆಚರಣೆಗೆ ಒಂದು ನಿರ್ದಿಷ್ಟ ಉದ್ದೇಶವಿರುತ್ತದೆ. ಕನ್ನಡ ಜನಪದ ಸಂಸ್ಕೃತಿಯ ಧಾರ್ಮಿಕ ಸ್ವರೂಪದೊಳಗೆ ಕೌಟುಂಬಿಕ, ಸಾಮಾಜಿಕ, ವ್ಯವಸಾಯಿಕ, ಧಾರ್ಮಿಕ ಹೀಗೆ ಬೇರೆ ಬೇರೆ ಆಯಾಮಗಳಿವೆ.

ಕೌಟುಂಬಿಕ ಆಯಾಮದಲ್ಲಿ ನಡೆಯುವ ನಾಮಕರಣ, ಒಸುಗೆ, ಋತುಸಂಸ್ಕಾರ ವಿವಾಹ ಮೊದಲಾದವು ಪ್ರಮುಖ ಆಚರಣೆಗಳಾಗಿ ಕಂಡುಬರುತ್ತವೆ. ಈ ಆಚರಣೆಗಳು ಇಂದಿಗೂ ಪ್ರಚಲಿತದಲ್ಲಿವೆ. ಆದರೂ ಮೂಲದ ಸದುದ್ದೇಶವನ್ನು ಮರೆತು ಕೇವಲ ವಿಜೃಂಭಿಸುವ ಆರ್ಥಿಕ ಬಲ ಪ್ರದರ್ಶನಗಳಾಗಿವೆ. ಪರಸ್ಪರ ಸಂಬಂಧಗಳನ್ನು ಬೆಸೆಯಬೇಕಾಗಿದ್ದ ಈ ಆಚರಣೆಗಳು ಸಂಬಂಧಗಳಲ್ಲಿ ವಿರಸವನ್ನುಂಟುಮಾಡಿ ವಿಘಟನೆಯ ದಿಕ್ಕಿನತ್ತ ಸಾಗಿದೆ.

ವ್ಯವಸಾಯಿಕ ಜೀವನದೊಳಗಂತೂ ಅನಂತ ಆಚರಣೆಗಳಿದ್ದು ಅವುಗಳಲ್ಲಿ ಜೋಕುಮಾರನ ಪೂಜೆ, ಚರಗಚೆಲ್ಲುವುದು, ಮಳೆರಾಯನ ಪೂಜೆ ಮುಂತಾದವು ಪ್ರಮುಖವಾಗಿವೆ. ಇಂಥ ಎಲ್ಲಾ ಆಚರಣೆಗಳು ಬೆಳೆಗಳ ಉಳಿವು ಮತ್ತು ಬೆಳವಣಿಗೆಗಾಗಿ ಆಚರಣೆಗೊಳ್ಳುತ್ತಿವೆ. ಸಾಮಾಜಿಕ ಆಯಾಮದಲ್ಲೂ ಅನೇಕ ಹಬ್ಬ–ಆಚರಣೆಗಳು ಜೀವನದ ಉತ್ಸಾಹವನ್ನು ಹೆಚ್ಚಿಸುವ ಸಂಗತಿಗಳಾಗಿ ಕಾರ್ಯನಿರ್ವಹಿಸಿವೆ.

ಮಾಟ–ಮಂತ್ರ

'ಮಾಟ–ಮಂತ್ರ ಜನಪದ ಧರ್ಮದ ಪ್ರಮುಖ ಭಾಗ' ಜನಪದ ಸಮಾಜಗಳಲ್ಲಿ ಇಂದಿಗೂ ಈ ಮಾಟ –ಮಂತ್ರದ ಛಾಯೆ ಇರುವುದನ್ನು ಗಮನಿಸಿದರೆ ಇದರ ಶಕ್ತಿಯ ಸ್ವರೂಪ ಹಾಗೂ ಮನುಷ್ಯನ ಮನಸ್ಸಿನ ಮೇಲೆ ಉಂಟುಮಾಡಿರುವ ಪರಿಣಾಮ ಅರ್ಥವಾಗುತ್ತದೆ. ಪ್ರಾಚೀನ ಪರಂಪರೆಯಲ್ಲಿ ಈ ಮಾಟ–ಮಂತ್ರವು ಬಳಕೆಯಾಗಿದ್ದು ಕೂಡ ಸಮೂಹ ಹಿತಾಸಕ್ತಿಯಿಂದಲೇ ಆದರೆ ನಂತರ ದಿನಗಳಲ್ಲಿ ಕೇಡನ್ನುಂಟುಮಾಡುವ ಕ್ರಿಯೆ ಮಾತ್ರ ಎನ್ನುವ ಭಾವನೆ ಮೂಡಿದೆ. ಇದು ಸರಿಯಾದ ಕ್ರಮವಲ್ಲ. ಕೆಟ್ಟದೆಂಬುದರಲ್ಲಿ ಉತ್ತಮಾಂಶಗಳು ಇರಲು ಸಾಧ್ಯ ಎಂಬುದಕ್ಕೆ ಈ ಸಂಗತಿ ಉತ್ತಮ ಉದಾಹರಣೆ, ಮನುಷ್ಯನ ಮನಸ್ಸಿನ ಮೇಲೆ ಪರಿಣಾಮ ಬೀರುವ ಶಕ್ತಿಯುಳ್ಳ ಈ ಮಾಟ ಮಂತ್ರ ಸಮಾಜದ ಸ್ವಾಸ್ಥ್ಯವನ್ನು ಕಾಪಾಡುವ ಬೆದರುಗೊಂಬೆಯಂತೆ ಕೆಲಸಮಾಡಿದೆ. ಇಂದಿಗೂ ನಮ್ಮ ಸಮಾಜದ ಬಹುಪಾಲ ಗ್ರಾಮೀಣ ಜನ ತಮ್ಮ ಕಷ್ಟ ಪರಿಹಾರಕ್ಕೆ, ಆನಾರೋಗ್ಯ ನಿವಾರಣೆಗೆ ಕಾನೂನು ಅಥವಾ ವೈದ್ಯಶಾಸ್ತ್ರದ ಮೊರೆ ಹೋಗದೆ ಮಂತ್ರವಾದಿಗಳ ಬಳಿ

ಹೋಗುವುದನ್ನು ಕಂಡರೆ ಈ ಅಂಶ ಸ್ಪಷ್ಟವಾಗುತ್ತದೆ. ಶ್ರೀ ಕ್ಷೇತ್ರ ಧರ್ಮಸ್ಥಳದ ಅಣ್ಣಪ್ಪನಿಗೆ ಸಲ್ಲಿಸುವ ಪೂಜಾ ವಿಧಾನಗಳು, ಸ್ವತ್ತುಗಳು ಕಳೆದುಕೊಂಡಾಗ ಅಣ್ಣಪ್ಪಸ್ವಾಮಿಗೆ ಕಾಣಿಕೆ ಹಾಕಿ ಬೆದರಿಸುವ ಪದ್ಧತಿಯು ಇಲ್ಲಿ ಗಮನಾರ್ಹ. ಇಂಥ ಮಾಟ–ಮಂತ್ರಗಳು ವೈದಿಕ ಧರ್ಮದ ದಾಳಿಯ ನಂತರವೂ ನಮ್ಮಲ್ಲಿ ಉಳಿದಿದೆ. ಆದರೆ ನಕಾರಾತ್ಮಕ ಸ್ವರೂಪದಲ್ಲಿಯೇ ಕಾಣುತ್ತಿರುವುದು ಹೆಚ್ಚು. ಸಮಕಾಲೀನ ಸಮಾಜಕ್ಕೆ ಇಂಥ ಬೆದರುಗೊಂಬೆಗಳು ಬೇಕು ಆದರೆ ಅದನ್ನು ನೈತಿಕತೆಯ ತಳಹದಿಯ ಮೇಲೆ ಬಳಸಬೇಕಿದೆ. ಪಾರಂಪರಿಕ ಶಿಕ್ಷಾವಿಧಿ ಎಂಬಂತೆ ಮಾಟಮಂತ್ರವನ್ನು ಪರಿಭಾವಿಸಿ ಅಳವಡಿಸಿಕೊಳ್ಳಬೇಕಾದ ತುರ್ತಿದೆ. ಈ ಕೆಲಸವನ್ನು ಬಹು ಎಚ್ಚರದಿಂದ ಮಾಡಬೇಕಾಗಿದ್ದು, ಸರಿಯಾದ ರೀತಿಯಲ್ಲಿ ನಡೆದಿದ್ದೆ ಆದರೆ ಮಾನವಪರವಾದ ಮಾಟ–ಮಂತ್ರಗಳೂ ಇರಲು ಸಾಧ್ಯ.

**ಸಮಾಜ**

ಕನ್ನಡ ಜನಪದ ಸಮಾಜಕ್ಕೆ ದೀರ್ಘವಾದ ಪರಂಪರೆಯಿದ್ದು, ಅದರೊಳಗೆ ಅತ್ಯಂತ ಮಾನವೀಯ ನೆಲೆಗಳಿವೆ. ಅದರಲ್ಲಿ ಮುಖ್ಯವಾಗಿ ಕುಟುಂಬ, ಬಂಧುತ್ವ, ಸಾಮಾಜಿಕ–ಸಾರ್ವಜನಿಕ ಸಂಬಂಧ, ಲಿಂಗ ಸಂಬಂಧಗಳು, ಸಮಾನತೆಯ ಕಲ್ಪನೆ ಹಾಗೂ ಸಮೂಹ ಪ್ರಜ್ಞೆಯ ನೆಲೆಗಳನ್ನು ಇಲ್ಲಿ ಮುಖ್ಯವಾಗಿ ಗಮನಿಸಲಾಗಿದೆ.

**ಕೌಟುಂಬಿಕ ಸಂಬಂಧಗಳು**

ಪ್ರಸ್ತುತ ಆಧುನಿಕ ಸಮಾಜದ ಸಂದರ್ಭದಲ್ಲಿ ಕೌಟುಂಬಿಕ ಸಂಬಂಧಗಳಲ್ಲಿ ಸಾಕಷ್ಟು ಸಡಿಲತೆ ಇದೆ. ಹಾಗಾಗಿಯೇ ಅವಿಭಕ್ತ ಕುಟುಂಬಗಳೆಲ್ಲವೂ ಒಡೆದು ಚೂರು ಚೂರಾಗಿವೆ. ಇಂಥ ಅಣು ಕುಟುಂಬಗಳಲ್ಲಿಯೂ ಕೂಡ ನೈಜ ಸಂಬಂಧಗಳ ಕೊರತೆ ಎದ್ದು ಕಾಣುತ್ತದೆ. ನಮ್ಮ ಕನ್ನಡ ಪರಂಪರೆಯಲ್ಲಿ ಇಂಥ ಸಂಬಂಧಗಳ ಚರಿತ್ರೆಯನ್ನು ಗಮನಿಸಿದರೆ ಆ ಬಂಧುತ್ವದ ಬಂಧ ಎಷ್ಟು ಗಾಢವಾದುದು ಎಂಬುದು ಅರಿವಾಗುತ್ತದೆ. ಮಾನವೀಯ ಸಂಬಂಧಗಳು ಮನುಷ್ಯನ ಬದುಕಿನ ಮಹತ್ವದ ಆಯಾಮ. ಬದುಕಿನ ಸಾರ್ಥಕತೆ ಇರುವುದೇ ಮನುಷ್ಯ ಸಂಬಂಧಗಳ ಸ್ವರೂಪದಲ್ಲಿ. ಇದನ್ನು ನಂಬಿರುವ ಜನಪದರು ಬದುಕಿನ ಪ್ರತಿಯೊಂದು ಹಂತದಲ್ಲಿ ಮನುಷ್ಯನ ಸಂಬಂಧಗಳನ್ನು ಗಟ್ಟಿಗೊಳಿಸುವ ಪ್ರಯತ್ನಮಾಡಿದ್ದಾರೆ. ಜೀವನದಲ್ಲಿ ತಂದೆ–ತಾಯಿ, ಮಕ್ಕಳು, ಅಣ್ಣ–ತಂಗಿ, ಅಕ್ಕ–ತಮ್ಮ, ಅತ್ತೆ–ಮಾವ–ಸೊಸೆ, ಸತಿ–ಪತಿ, ಭಾವ–ಮೈದುನ ಇವೆ ಮೊದಲಾದ ವರಸೆಗಳು ಬಹುಮುಖ್ಯ. ಸುಖೀ ಜೀವನ ಸಾಧ್ಯವಾಗಬೇಕಾದರೆ ಈ ಎಲ್ಲಾ ಮಲುಕಿನ ಸಂಬಂಧಗಳ ನಿಜವಾದ ನೆಲೆಯಲ್ಲಿ ಅರಳಬೇಕಾಗುತ್ತದೆ. ದುರಾದೃಷ್ಟವೆಂದರೆ ಪ್ರಸ್ತುತ ಸಮಾಜ ಇಂಥ ಸಂಬಂಧಗಳೊಡನೆ ಬದುಕುವುದು ಬೇಡ ಅವುಗಳ ಸರಿಯಾದ ಪರಿಜ್ಞಾನ ಕೂಡ ಇಲ್ಲ. ಎಲ್ಲಾ ಸಂಬಂಧಗಳನ್ನು ಅಂಕಲ್–ಆಂಟಿಯ ಎರಡೇ ಎರಡು ರೂಪಗಳಲ್ಲಿ ಗುರುತಿಸಿಕೊಳ್ಳುವಷ್ಟು ಸಂಬಂಧಗಳ ದಾರಿದ್ರ್ಯವಿದೆ. ಸಮಾಜ ತಲುಪಿರುವ ಈ ದುಸ್ಥಿತಿಯ ಕಾರಣಕ್ಕೆ ದೂರದರ್ಶನಗಳಲ್ಲಿ ಇಂಥ ಮಾನವ ಸಂಬಂಧಗಳ ಸ್ವರೂಪ ಮತ್ತು ವರಸೆಗಳನ್ನು ಕಂಡುಹಿಡಿದು ಹಣಗಳಿಸುವ ಜೀನ್ಸ್ ನಂತಹ ಕಾರ್ಯಕ್ರಮಗಳು ರೂಪುಗೊಂಡಿವೆ. ಮನುಷ್ಯ ಸಂಬಂಧಗಳ ವಿಷಯದಲ್ಲಿ ಶ್ರೀಮಂತ ಪರಂಪರೆಯನ್ನು ಹೊಂದಿರುವ ನಾವು ಇಂಥ ದುಸ್ಥಿತಿಗೆ ತಲುಪಿದ್ದು ಮಾತ್ರ ಒಂದು ಸಾಮಾಜಿಕ ದುರಂತ.

ಕುಟುಂಬದ ಸಂಬಂಧಗಳಲ್ಲಿ ತಂದೆ–ತಾಯಿ–ಮಕ್ಕಳ ಬಂಧ ಗಾಢವಾದುದು ಮತ್ತು ಮಧುರವಾದುದೂ ಹೌದು. ತಾಯಿ ತನ್ನ ಎಲ್ಲಾ ಸುಖಗಳನ್ನು ಮರೆತು ಬರೀ ಕಷ್ಟಗಳನ್ನೇ ಉಂಡು ಮಕ್ಕಳಿಗೆ ಜನ್ಮ ನೀಡಿ ಅವರಿಗೆ ಒಂದು ಭವಿಷ್ಯ ರೂಪಿಸುವಲ್ಲಿ ಶ್ರಮಿಸುತ್ತಾಳೆ. ಅಣು ರೂಪದ ಮಗುವನ್ನು ಸ್ವತಂತ್ರ್ಯ ಜೀವನ ನಡೆಸುವ ವ್ಯಕ್ತಿಗಳಾಗಿ ರೂಪಿಸುವಲ್ಲಿ ತಾಯಿಯ ಪಾತ್ರ ಹಿರಿದು. ಈ ತಾಯಿಯ ಜವಾಬ್ದಾರಿಗೆ ತಂದೆಯು ಕೈಜೋಡಿಸಿದ್ದಾರೆ. ಇಂಥ ಕಾರಣಕ್ಕಾಗಿಯೇ ತಾಯಿ–ತಂದೆಗೆ ಕುಟುಂಬದಲ್ಲಿ ದೊಡ್ಡ ಗೌರವ. ಮಕ್ಕಳಿಗಂತೂ ಮಾತಾಪಿತರೆಂದರೆ ದೇವರು.

ತಂದೀಯ ನೆನೆದರೆ ತಂಗೂಳು ಬಿಸಿಯಾಯ್ತು
ಗಂಗಾದೇವಿ ನನ್ನ ಹಡೆದವ್ವ । ನೆನದರೆ
ಮಾಸಿದ ತಲೆ ಮಡಿಯಾಯ್ತು ।

ತಾಯಿ–ತಂದೆಯರ ಶಕ್ತಿ ಮತ್ತು ಪಾತ್ರಗಳೆರಡನ್ನೂ ಮೇಲಿನ ತ್ರಿಪದಿ ಚನ್ನಾಗಿಯೇ ಸ್ಪಷ್ಟಪಡಿಸುತ್ತದೆ. ಇಲ್ಲಿಯೇ ಸ್ಪಷ್ಟಪಡಿಸಿಕೊಳ್ಳಬೇಕಾದ ಸಂಗತಿ ಎಂದರೆ ತಂದೆ–ತಾಯಿಯರಲ್ಲಿ ತಾಯಿಗೆ ಗೌರವ ಹೆಚ್ಚು

ಕಾಸಿಗೆ ಹೋಗಾಕ ಏಸೊಂದು ದಿನ ಬೇಕು।
ತಾಸೊತ್ತಿನಾದಿ ತವರಾಗೆ । ಕಾಸಿ ಕುಂಪವ್ವೆ
ಹಡದವ್ವ।

ಈ ಪದ್ಯ ತಾಯಿಗೆ ಮಕ್ಕಳು ಕೊಡುವ ಗೌರವದ ಅಂತಿಮ ಹಂತ. ಹೀಗೆ ತಂದೆ–ತಾಯಿಯರನ್ನು ದೇವರೆಂದು ಕಾಣುವ ಪರಂಪರೆಯಲ್ಲಿ ತಂದೆ–ತಾಯಿಯರು ಕೂಡ ತಮ್ಮ ಪಾತ್ರವನ್ನು ಸರಿಯಾಗಿಯೇ ನಿರ್ವಹಿಸಿದ್ದಾರೆ. ಮಕ್ಕಳಿಗೆ ಕೊಡಬೇಕಾದ ಗೌರವ, ಅವರನ್ನು ಭವಿಷ್ಯದ ಪ್ರಜೆಗಳಾಗಿ ರೂಪಿಸುವ ಜವಾಬ್ದಾರಿಯನ್ನು ಹೊತ್ತು ಮುನ್ನಡೆದ ಬಗೆ ಅನುಕರಣೀಯ. ಇನ್ನು ಕುಟುಂಬದಲ್ಲಿ ಅಣ್ಣ ತಮ್ಮ, ತಂಗಿಯರ ಸಂಬಂಧಗಳು ಮಧುರ. ಇವರ ನಡುವಿನ ನಂಟು ಅತೀ ವಿಶಿಷ್ಟ, ಪರಸ್ಪರ ಒಬ್ಬರಿಗೊಬ್ಬರು ಸಹಕಾರ, ಬೆಂಬಲದೊಂದಿಗೆ ಆತ್ಮವಿಶ್ವಾಸದ ಬದುಕನ್ನು ಕಟ್ಟಿಕೊಂಡಿದ್ದಾರೆ.

ಹೆಣ್ಣಿನ ಜನುಮಕೆ ಅಣ್ಣ–ತಮ್ಮರು ಬೇಕು।
ಬೆನ್ನು ಕಟ್ಟುವರು ಸಭೆಯೊಳಗೆ। ಸಾವಿರ ।
ಹೊನ್ನು ಕಟ್ಟುವರು ಉಡಿಯೊಳಗೆ ॥ ಎಂದು ತಂಗಿ ಹೇಳಿದರೆ ಅಣ್ಣ 'ತನ್ನ ತಂಗಿ ನಡೆದರೆ ರುದ್ರನ ತೇರು ಎಳೆದಂತೆ' ಎಂದು ಭಾವಿಸುತ್ತಾಳೆ. ತಂಗಿಯ ಮದುವೆಯ ನಂತರ ಅವಳನ್ನು ಗಂಡನ ಮನೆಗೆ ಕಳುಹಿಸುವಾಗಿ ತಂದೆ–ತಾಯಿಯಷ್ಟೆ ದುಃಖ ಪಡುವವರು ಅಣ್ಣ–ತಮ್ಮಂದಿರು. ತಂಗಿಯ ಅಥವಾ ಅಕ್ಕನ ಗಂಡನ ಮನೆ–ತವರು ಮನೆ ಸಂಬಂಧಗಳನ್ನು ಮುನ್ನಡೆಸುವವರು ಇವರೆ. ಈ ಹಿನ್ನೆಲೆಯಲ್ಲಿ ಕನ್ನಡ ಜನಪದ ಸಾಹಿತ್ಯದಲ್ಲಿ ವಿಫುಲವಾದ ವಿವರಗಳು ದಾಖಲಾಗಿವೆ. ಈ ಎಲ್ಲಾ ಸಂಗತಿಗಳು ಬದುಕಿನ ಕೌಟುಂಬಿಕ ಸಂಬಂಧಗಳಿಗೆ ಆದರ್ಶಪ್ರಾಯವಾಗಿವೆ.

ಕುಟುಂಬದಲ್ಲಿ ಸತಿ–ಪತಿಯರ ಪಾತ್ರ ಹಿರಿದು. ಅವರ ನಡುವಿನ ಸಂಬಂಧದ ಸ್ವರೂಪ ಕುಟುಂಬದ ನೆಮ್ಮದಿಗೆ ಕಾರಣವಾಗುತ್ತದೆ. ಸತಿ–ಪತಿಯರ ಸಂಸಾರ ಒಂದು ಸಾಗರ ಅದನ್ನು ಜನಪದ ತ್ರಿಪದಿಯೊಂದು ಹೀಗೆ ವಿವರಿಸುತ್ತದೆ.

ಸಂಸಾರವೆಂಬುದು ಸಾಗರ ಹೊಳೆಯವ್ವ
ಈಸ ಬಲ್ಲವಗ ಎದಿಯುದ್ದ । ಗಿಳಿರಾಮ
ಓದು ಬಲ್ಲವನ ಕೈಲಾಸ॥

ಇಂಥ ಸಂಸಾರದಲ್ಲಿ ಪ್ರಮುಖ ಪಾತ್ರಗಳಾದ ಸತಿ–ಪತಿಗಳು ಹಲವಾರು ಸರಸ–ವಿರಸದ ಸಂದರ್ಭಗಳನ್ನು ಎದಿರುಗೊಳ್ಳುತ್ತಾರೆ. ಸಿಟ್ಟು, ಮುನಿಸು ರಾಜಿ–ಸಂಧಾನಗಳು ನಡೆಯುತ್ತಲೇ ಇರುತ್ತವೆ. ಇಂಥ ಇವರ ಜಗಳಗಳೆಲ್ಲ 'ಗಂಡ – ಹೆಂಡಿರ ಜಗಳ ಉಂಡು ಮಲಗುವ ತನಕ ಎಂಬಂತೆ ಕ್ಷಣಿಕ. ಹಾಗಾಗಿ ಇವರ ನಡುವಿನ ಬಾಂಧವ್ಯ ಸುಮಧುರವಾದುದು. ಪರಸ್ಪರ ಪ್ರೀತಿ–ವಿಶ್ವಾಸಗಳಿಂದ ಕೂಡಿದ ಕೌಟುಂಬಿಕ ವಾತಾವರಣ ಇರುವುದರಿಂದಾಗಿ ಇಡೀ ಕುಟುಂಬದ ವಾತಾವರಣ ಆರೋಗ್ಯಪೂರ್ಣವಾಗಿರುತ್ತದೆ. ಇವರ ನಡುವಿನ ಸಂಬಂಧಗಳ ಸ್ವರೂಪ ಎಂಥದ್ದು ಎಂದರೆ ಹೆಂಡತಿ ಹೇಳುತ್ತಾಳೆ :

ಕೂಲಿ ಮಾಡಿದರೇನು। ಕೋರಿ ಹೊತ್ತರೇನು?
ನಮಗೆ ನಮರಾಯ ಬಡವೇನ। ಬಂಗಾರ
ಮಾಲು ಇದ್ದಾಂಗ ಮನೆಯಾಗ ॥

ಇದಕ್ಕೆ ಪ್ರತಿಯಾಗಿ ಗಂಡ
ಕಮಲದ ಹೂ ನಿನ್ನ ಕಾಣದೆ ಇರಲಾರೆ
ಮಲ್ಲಿಗೆ ಮಾಯ ಬಿಡಲಾರೆ । ಕೇದಿಗೆ

ಗರಿ ನಿನ್ನನಗಲಿ ಇರಲಾರೆ ಎನ್ನುತ್ತಾನೆ.

ಹೀಗೆಯೇ ಜನಪದ ಸಮಾಜದ ಕೌಟುಂಬಿಕ ಸಂಬಂಧಗಳು ಅತ್ಯಂತ ಆಳವಾದ ನೆಲೆಗಳನ್ನು ಹೊಂದಿವೆ. ಈ ಸಂಬಂಧಗಳ ಅನೇಕ ರೂಪುಗಳು ಗಮನಾರ್ಹವಾದವುಗಳಾಗಿವೆ.

ಕನ್ನಡ ಜನಪದ ಸಮಾಜದ ಶ್ರೇಷ್ಠತೆ ಇರುವುದು ಬರೀ ರಕ್ತ ಸಂಬಂಧದ ನೆಲೆಗಳಲ್ಲಿ ಮಾತ್ರವಲ್ಲ. ಅದರಾಚೆಗಿನ ಸಂಬಂಧಗಳ ಸ್ವರೂಪದಲ್ಲಿ ಕುಟುಂಬದ ಹೊರಗಿನ ಅನೇಕ ವ್ಯಕ್ತಿ–ಸಮೂಹಗಳನ್ನು ತಮ್ಮ ರಕ್ತ ಸಂಬಂಧದ ವಾಚಕಗಳಲ್ಲಿಯೇ ಕರೆಯುವುದು ರೂಢಿ. ಅಮ್ಮ, ಚಿಕ್ಕಮ್ಮ, ಚಿಕ್ಕಪ್ಪ, ಮಾವ, ಭಾವ, ಸೊಸೆ, ಅತ್ತೆ, ಇತ್ಯಾದಿ ವಾಚಕಗಳಿಂದ ಎಲ್ಲಾ ಮನುಷ್ಯರ ಸಂಬಂಧಗಳನ್ನು ಬಿಗಿದು ಕಟ್ಟುವ ಇವರ ಬದುಕಿನ ಪರಿ ಅದ್ಭುತವಾದುದು. ಈ ವಿಸ್ತಾರತೆ ಕೇವಲ ಊರಿಗೆ, ಪ್ರದೇಶಕ್ಕೆ ಜಾತಿಗೆ ಮಾತ್ರ ಸಂಬಂಧಿಸಿದ್ದಲ್ಲ. ಅದರಾಚೆಗೆ ಧರ್ಮದ ವ್ಯಾಪ್ತಿಗೂ ವಿಸ್ತರಿಸಿಕೊಳ್ಳುತ್ತದೆ. ಮುಸ್ಲಿಂರನ್ನು, ಕ್ರಿಶ್ಚಿಯನ್ನರನ್ನು ಕನ್ನಡ ಜನಪದ ಚಿಕ್ಕಪ್ಪ, ದೊಡ್ಡಪ್ಪ, ಮಾವ, ಅಣ್ಣ, ತಮ್ಮ, ಅಕ್ಕ, ಚಿಕ್ಕಮ್ಮ ಮೊದಲಾದ ವಾಚಕಗಳಿಂದ ಕರೆಯುವುದನ್ನು ಕಂಡರೆ ಕನ್ನಡ ಜನಪದರ ಸಂಸ್ಕೃತಿಯ ಮಾನವೀಯ ಸಂಬಂಧಗಳ ಸ್ವರೂಪಗಳ ದರ್ಶನವಾಗುತ್ತದೆ. ಇಂಥ ಸಂದರ್ಭಗಳನ್ನು ಗಮನಿಸಿದಾಗ ಈ ಬದುಕಿನ ಉದಾರ ಮಾನವೀಯತೆ ಎಂಥದ್ದು ಎಂಬುದು ಮನವರಿಕೆಯಾಗುತ್ತದೆ.

ಸಮಾನತೆಯ ಕಲ್ಪನೆ

ಕನ್ನಡ ಜನಪದ ಸಮಾಜದ ಬಹುಮುಖ್ಯ ಆಯಾಮಗಳಲ್ಲಿ ಸಮಾನತೆಯ ಆಶಯವೂ ಒಂದು. ಈ ಸಮಾಜದ ರಚನೆಯನ್ನು ಕಂಡರೆ ಅದನ್ನು ಸಮರ್ಥಿಸುವ ಅನೇಕ ಸಂಗತಿಗಳು ದೊರೆಯುತ್ತವೆ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದೆಂದರೆ ಆಧುನಿಕ ವಿದ್ಯಾಮಾನಗಳು ನಮ್ಮ ಪಾರಂಪರಿಕ ಜೀವನಕ್ರಮಗಳನ್ನು ಪ್ರಭಾವಿಸುವವರೆಗೂ ತಾನು ಬದುಕಿ ಮತ್ತೊಬ್ಬರಿಗೂ ಬದುಕುಲು ಅವಕಾಶ ಮಾಡಿಕೊಡಬೇಕೆನ್ನುವ ಸಮಾನತೆಯ ಭಾವ ರೂಢಿಯಲ್ಲಿದ್ದಿತ್ತು. ಜಾತಿಯನ್ನು ಪೋಷಿಸಿ ಬೆಳೆಸಿದ ವೈದಿಕ ಧರ್ಮದ ಮನೋಭಾವಗಳಿಗೆ ವಿರುದ್ಧವಾಗಿ ಜನಪದ ಧರ್ಮದ ಸಮಾಜದಲ್ಲಿ ಮೇಲು ಜಾತಿ, ಕೆಳಜಾತಿ, ಹಿಂದೂ, ಮುಸ್ಲಿಂ ಎನ್ನುವ ಯಾವುದೇ ರೀತಿಯ ಭೇದ–ಭಾವಗಳಿಲ್ಲದೆ ಎಲ್ಲರೂ ಸಮಾನರಾಗಿ ಸಾಮರಸ್ಯದ ಬದುಕನ್ನು ಬದುಕುವ ಕ್ರಮವನ್ನು ಕಾಣಬಹುದು. ಕರ್ನಾಟಕದ ಮೊಹರಂ ಹಬ್ಬದಲ್ಲಿ ಹಾಡಲ್ಪಡುವ ಹಾಡುಗಳು ಅಂಥ ಸಂದೇಶವನ್ನು ಸಾಕಾರಗೊಳಿಸುತ್ತವೆ. ದರ್ಗಾಗಳಲ್ಲಿ ಸಕ್ಕರೆ ಓದಿಸಿಕೊಂಡು ಬರುವ ಹಿಂದೂಗಳು, ದೇವಸ್ಥಾನಗಳಿಗೆ ಪೂಜೆ ಮಾಡಿಸಿ ಕೈ ಮುಗಿಯುವ ಮುಸಲ್ಮಾನರು ಇಂದಿಗೂ ನಮ್ಮ ಸಮಾಜಗಳಲ್ಲಿ ಇರುವುದನ್ನು ಕಂಡರೆ ಕನ್ನಡ ಜನಪದ ಸಮಾಜದ ಸಮಾನತೆಯ ಕಲ್ಪನೆ ಇನ್ನಷ್ಟು ಸ್ಪಷ್ಟವಾಗುತ್ತದೆ. ಸಾವಳಿಗ ಮಠ, ಶಿರಹಟ್ಟಿಯ ಪಕೀರಸ್ವಾಮಿ, ಶಿಶುನಾಳ ಶರೀಫ, ಬಾಬಯ್ಯನ ಜಲ್ಡಿಗಳು, ಅಲಾವಿ ಕುಣಿತಗಳು, ಉರುಸುಗಳು, ದೀವಳಿಗೆ ದಂಡು ಉರಾಡುವುದು, ಅಂಟಿಕೆ–ಪಂಟಿಕೆ ಸಂಪ್ರದಾಯದ ಜ್ಯೋತಿ ನೀಡುವ ಕ್ರಿಯೆಗಳೆಲ್ಲವೂ ಕನ್ನಡ ನೆಲದ ಸಂಸ್ಕೃತಿಯಲ್ಲಿ ಕಂಡುಬರುವ ಮತೀಯ ಸೌಹಾರ್ದತೆಗೆ ಸಾಕ್ಷಿಗಳಾಗಿವೆ. ಮತೀಯ ಕಲ್ಪನೆಗಳ ಹೊರತಾಗಿ ಬದುಕಿನ ಸಾಮಾನ್ಯ ಜೀವನದ ಸಂದರ್ಭದೊಳಗೂ ಸೌಹಾರ್ದ ಜೀವನಕ್ಕೆ ಹಂಬಲಿಸಿದ ರೀತಿಗೆ ಈ ಕೆಳಗಿನ ತ್ರಿಪದಿ ಒಂದು ಅತ್ಯುತ್ತಮ ಉದಾಹರಣೆ.

ಭಾಗಾದಿ ಬಲಕಿರಲಿ ವೈದಿ ತಾ ಎಡಕಿರಲಿ ।
ಚಾಡಿಕಾರರ ಮನೆಯು ಎದುರಿರಲಿ । ಬಲಭೀಮ।
ದೇವ ನನ ಮ್ಯಾಲ ದಯವಿರಲಿ ॥

ಇಂಥ ಸರ್ವಸಮಾನತೆಯ ಸಮಾಜದ ಹಿನ್ನೆಲೆಯಿರುವ ನಮ್ಮ ಸಮಾಜ ಇಂದಿಗೆ ಅತ್ಯಂತ ಸ್ಥಿರ ಸ್ಥಿತಿಗೆ ತಲುಪಿರುವುದು ದೊಡ್ಡ ದುರಂತ.

ಸಮಷ್ಠಿ ಪ್ರಜ್ಞೆ

ಕನ್ನಡ ಜನಪದ ಲೋಕದ ಬಹುಮುಖ್ಯ ಧ್ಯೇಯ 'ತಿರ್ಕೊಂಡು ಬಂದ್ರು ಕರಕೊಂಡು ಉಣ್ಣು' ಬದುಕಿನ ಕಷ್ಟ ಸುಖಗಳಲ್ಲಿ ಯಾವುದಾದರೂ ಸರಿ ಸಾಮೂಹಿಕವಾಗಿ ಅನುಭವಿಸಬೇಕೆಂಬುದು ಇಲ್ಲಿಯ ಮೌಲ್ಯ. ಇಲ್ಲಿ ಏಕ ವ್ಯಕ್ತಿ ಪಾಲ್ಗೊಳ್ಳುವಿಕೆ, ಏಕ ವ್ಯಕ್ತಿ ದೃಷ್ಟಿ ಬಹಳ ಕಡಿಮೆ. ಕನ್ನಡ ಜನಪದ ಸಾಹಿತ್ಯ ಕಲೆ, ಆರಾಧನೆ, ಆಚರಣೆಗಳಲ್ಲಿ ಈ ದೃಷ್ಟಿ ಪ್ರಧಾನವಾಗಿ ಗೋಚರಿಸುತ್ತದೆ. ಮುಖ್ಯವಾಗಿ ಇವರ ಬದುಕಲ್ಲಿ ಖಾಸಗೀ ಆಸ್ತಿಯ ಕಲ್ಪನೆಯೇ ಇಲ್ಲ. ಎಲ್ಲವೂ ಸಾಮೂಹಿಕ ಅಥವಾ ಸಾರ್ವಜನಿಕ ಆಸ್ತಿಯೆ. ನನ್ನದು ಎನ್ನುವುದು ಅಪರಾಧ ಎಂದು ಭಾವಿಸಿದ ಇವರು ಇರುವುದೆಲ್ಲವೂ ನಮ್ಮದು ಎಂದುಕೊಳ್ಳುತ್ತಾರೆ.

ಕನ್ನಡ ಜನಪದ ತ್ರಿಪದಿ ಸಾಹಿತ್ಯದಲ್ಲಿ ದೊರೆಯುವ ಎರಡು ತ್ರಿಪದಿಗಳನ್ನು ಇಲ್ಲಿ ಉಲ್ಲೇಖಿಸಿದರೆ ಜನಪದರ ಸಮಷ್ಠಿ ಪ್ರಜ್ಞೆ ಎಂತಹದ್ದು ಎಂಬುದು ಅರಿವಾಗುತ್ತದೆ.

ಸುಕ್ರವಾರದ ದಿನ ಸುಕದ ಸ್ಯಾವಿಗೆ ಮಾಡಿ ।
ಅಕ್ಕ ದ್ಯಾಮವ್ವಾಗೆ ಎಡೆಮಾಡಿ । ಬೇಡಿದೆ ।
ಸುತ್ತೇಳು ಬಳಗ ಸುಖವಿರಲಿ ॥

'ಆಚಾರಕೆ ಅರಸಾಗು ನೀತಿಗೆ ಪ್ರಭುವಾಗು ।
ಮಾತಿನಲಿ ಚೂಡಾಮಣಿಯಾಗು । ನನ ಕಂದ ।
ಜ್ಯೋತಿಯೇ ಆಗು ಜಗಕೆಲ್ಲ'

ಇಲ್ಲಿನ ಮೊದಲ ಪದ್ಯದಲ್ಲಿ ದೇವರಿಗೆ ಪೂಜೆ ಸಲ್ಲಿಸಿ ಪ್ರಾರ್ಥಿಸುವ ಸಮಯದಲ್ಲಿ ವೈಯುಕ್ತಿಕವಾಗಿ ನನಗೆ ಮಾತ್ರ ಒಳ್ಳೆಯದನ್ನು ಮಾಡು ಎಂದು ಬೇಡದೆ 'ಸುತ್ತೇಳು ಬ ಳಗ ಸುಖವಿರಲಿ' ಎಂಬುದಾಗಿ ಬೇಡುವುದರ ಮೂ ಲಕ ತಮಗಿರುವ ಸಮಷ್ಠಿ ಹಿತದ ಮನೋಭಾವನೆಯನ್ನು ಕಾಣಿಸುತ್ತಾರೆ. ಇನ್ನೂ ಎರಡನೇ ಪದ್ಯದಲ್ಲಿ ತಾಯಿ ತನ್ನ ಮಗು ಮುಂದೇನಾಗಬೇಕು ಎಂಬ ಕನಸನ್ನು ತನ್ನ ಎದೆ ಹಾಲಿನ ಜೊತೆಗೆ ಮಗುವಿಗೆ ಉಣಿಸುತ್ತಾ ಮಗನೇ ನೀನು ಮತ್ತು ನಿನ್ನ ಕುಟುಂಬವನ್ನು ಮಾತ್ರ ಬೆಳಗುವಂತಹ ದೀಪ ಮಾತ್ರವಾಗದೆ 'ಜ್ಯೋತಿಯೇ ಆಗು ಜಗಕೆಲ್ಲ' ಎಂದು ಹರಸುವ ತಾಯಿಯ ಭಾವನೆಯಲ್ಲಿ ವ್ಯಕ್ತಿಗತ ಹಿತವನ್ನು ಮೀರಿದ ಸಮಷ್ಟಿಯ ಹಿತ ಕಾಣುತ್ತದೆ. ಹಾಗಾಗಿಯೇ ಒಟ್ಟಾದರೆ ನಾವು ನಿಲ್ಲುತ್ತೇವೆ. ಒಡೆದರೆ ಬಿದ್ದು ಹೋಗುತ್ತೇವೆ ಎನ್ನುವ ಅರಿವು ಪ್ರಧಾನವಾಗಿದೆ. ಅನೇಕ ಜನಪದ ಸಂಪ್ರದಾಯ–ಆಚರಣೆಗಳಲ್ಲಿ ಸಮೂಹ ಪಾಲ್ಗೊಳ್ಳುವಿಕೆ ಬಹುಮುಖ್ಯ ಲಕ್ಷಣವಾಗಿದೆ. ಸಾಂಸ್ಕೃತಿಕ ನಾಯಕ–ನಾಯಕಿಯರೂ ಕೂಡ ತಮ್ಮ ಹೋರಾಟ ನಡೆಸಿದ್ದು ತಮಗಾಗಲಿ, ತಮ್ಮ ಕುಟುಂಬಕ್ಕಾಗಲಿ ಅಲ್ಲ ಬದಲಿಗೆ ಅವರನ್ನು ಒಳಗೊಂಡಂತೆ ಇಡೀ ಸಮೂಹದ ಹಿತಕ್ಕೆ. ಅದಕ್ಕಾಗಿಯೇ ಅವರು ಇಡೀ ಸಮುದಾಯದ ದೈವವಾಗುತ್ತಾರೆ.

ಸ್ತ್ರೀಪ್ರಧಾನ ಮೌಲ್ಯಗಳು

ಕನ್ನಡ ಜನಪದ ಸಂಸ್ಕೃತಿಯ ಪರಂಪರೆಯಲ್ಲಿ ಹೆಣ್ಣಿಗೆ ಬಹು ಮಹತ್ವದ ಸ್ಥಾನವಿದ್ದು ಕೆಲವೊಮ್ಮೆ ಗಂಡಿಗಿಂತ ಹೆಚ್ಚಿನ ಮಾನ್ಯತೆಗೆ ಒಳಗಾಗಿರುವುದನ್ನು ಕಾಣಬಹುದು. ಇದಕ್ಕೆ ಕಾರಣ ಅವಳಿಗಿರುವ ಉತ್ಪಾದಕತೆಯ ಶಕ್ತಿ. ಯಾವುದೇ ಸಂಸ್ಕೃತಿಯ ಮೂಲದಲ್ಲಿ ಇದೇ ಗುಣ ಇರಲಿಕ್ಕೆ ಸಾಧ್ಯ. ಯಾರಲ್ಲಿ ಉತ್ಪತ್ತಿಮಾಡುವ ಶಕ್ತಿ–ಸಾಮರ್ಥ್ಯ ಇರುತ್ತದೆಯೋ ಅವರಿಗೆ ಸಮಾಜದಲ್ಲಿ ವಿಶೇಷ ಗೌರವ–ಸ್ಥಾನಮಾನಗಳು ಇರುತ್ತವೆ. ಹಲವಾರು ವರ್ಷಗಳಿಂದ ನಮ್ಮ ಸಾಮಾಜಿಕ ವ್ಯವಸ್ಥೆಯೊಳಗೆ ಮಹಿಳೆಯ ಶಕ್ತಿ ಮತ್ತು ಸ್ವಾತಂತ್ರ್ಯವನ್ನು ಹರಣ ಮಾಡುತ್ತಾ ಬರಲಾಗಿದೆ. ಇದರ ಪರಿಣಾಮವಾಗಿ ಹೆಣ್ಣು ಎಂದರೆ ಸಮಾಜದ ದ್ವಿತೀಯ ದರ್ಜೆಯ ಪ್ರಜೆ ಎಂಬಂತಾಗಿದೆ. ಗಂಡಿಗಿಲ್ಲದ ಅನೇಕ ನಿರ್ಬಂಧಗಳನ್ನು ಈಕೆಯ ಮೇಲೆ ಹೊರಿಸಲಾಗಿದೆ. ಇದು ಯಾವ ದೃಷ್ಟಿಯಲ್ಲೂ ಸರಿಯಲ್ಲ ಎಂಬುದನ್ನು ಈಗಾಗಲೇ ಬಹುಪಾಲು ಜನ ಒಪ್ಪಿದ್ದಾರೆ.

ಚರಿತ್ರೆಯ ಗತಿಯಲ್ಲಿ ಯಾತಕ್ಕಾಗಿ ಈ ತರಹದ ಪಲ್ಲಟಗಳಾದವು ಎಂಬುದರ ಬಗ್ಗೆಯೂ ಶೋಧನೆಗಳನ್ನು ನಡೆಸಲಾಗಿದೆ. ಇಂಥ ಶೋಧನೆಗಳಿಂದ ತಿಳಿದು ಬಂದಿರುವುದೇನೆಂದರೆ ಕಾಲದ ಚಲನೆಯಲ್ಲಿ ದುಡಿಮೆಯ – ಆರ್ಥಿಕ ಶಕ್ತಿಯ ಕೇಂದ್ರವಾಗಿದ್ದ ಮಹಿಳೆಯನ್ನು ಪುರುಷನ ಸರ್ವಾಧಿಕಾರದ ಮನೋಭಾವ ಮೂಲೆಗುಂಪಾಗಿಸಿದೆ. ಆಧುನಿಕ ಕಾಲಕ್ಕೆ ಬರುತ್ತಿದ್ದ ಹಾಗೆಯೇ ಈ ಪ್ರಕ್ರಿಯೆ ಅತ್ಯಂತ ಸೂಕ್ಷ್ಮವಾಗಿ ಆಳವಾಗಿ ಬೇರೂರಿ ತನ್ನ ಕೆಲಸವನ್ನು ಅತ್ಯಂತ ಯಶಸ್ವಿಯಾಗಿ ನಡೆಸಿದೆ.

ಈಗಾಗಲೇ ಹೇಳಿದಂತೆ ಜನಪದ ಸಂಸ್ಕೃತಿಯಲ್ಲಿ ಹೆಣ್ಣು ಸಮಾನ ಉತ್ಪತ್ಯಾತ್ಮಕ ಘಟಕ. 'ಹೆಣ್ಣನ್ನು , ಗೋವನ್ನು, ಬ್ರಾಹ್ಮಣನನ್ನು ಕೊಲ್ಲಬಾರದು' ಎಂಬ ಇವೊತ್ತಿನ ಶಿಷ್ಟಧಾರೆಗಳ ನಾ ಣ್ನುಡಿ ಜನಪದ ಸಮಾಜದಲ್ಲಿ ಒಂದು ನಂಬಿಕೆ ಮತ್ತು ನಡಾವಳಿ. ಇದರಲ್ಲಿ ಅವೈದಿಕ ವಿರೋಧಿ ನೀತಿಗಳಿವೆ ಎಂಬುದನ್ನು ಅರಿತು ನೋಡುವುದಾದರೆ ಹೆಣ್ಣು–ಗೋವುಗಳನ್ನು ಹೋಲಿಸಿ ನೋಡಿರುವುದರಲ್ಲಿ ಅರ್ಥವಿದೆ. ಕೃಷಿ–ಪಶುಪಾಲನೆಯ ಸಾಂಸ್ಕೃತಿಕ ಹಿನ್ನೆಲೆಯಿರುವ ಈ ಪರಂಪರೆಗಳು ಹೆಣ್ಣನ್ನು ಉತ್ಪತ್ತಿಯ ಮೂಲ ಸಾಧನವಾಗಿ ಕಂಡಿರುವುದರಲ್ಲಿ ವಿಶೇಷವೇನೂ ಇಲ್ಲ. ಗಂಡಿನಂತೆಯೇ ಕೆಲವೊಮ್ಮೆ ಗಂಡಿಗಿಂತಲೂ ಮಿಗಿಲಾಗಿ ಕೃಷಿ ಹಾಗೂ ಮತ್ತಿತರ ಮೂಲ ವೃತ್ತಿಗಳಲ್ಲಿ ಮಹಿಳೆ ದುಡಿದಿದ್ದಾಳೆ. ಸಾಮಾನ್ಯ ಜನರು ಹೆಣ್ಣನ್ನು ಕೊಲ್ಲಬಾರದು ಎಂಬಲ್ಲಿ ಆರ್ಥಿಕ ಶಕ್ತಿಯ ಸಂರಕ್ಷಣೆಯೇ ಆಗಿರುವುದನ್ನು ಗಮನಿಸಬೇಕು.

ಈ ಸಮಾಜದೊಳಗೆ ಹೆಣ್ಣಿಗೆ ಹೆಚ್ಚಿನ ಪ್ರಾಮುಖ್ಯತೆ ಬರುವುದಕ್ಕೆ ಇರುವ ಮತ್ತೊಂದು ಕಾರಣ ಸಂತಾನ ಅಭಿವೃದ್ಧಿಯದು. ಆದಿಮಾನವನ ಆರಂಭದ ದಿನಗಳಲ್ಲಿ ಮಕ್ಕಳು ಕೇವಲ ಮುದ್ದಿನ ಜೀವಗಳಲ್ಲ. ಬದಲಿಗೆ ದುಡಿಮೆಯ ಶಕ್ತಿಗಳು. ಇಂಥ ಶಕ್ತಿಗಳಿಗೆ ಜನ್ಮ ನೀಡಿದಕ್ಕಾಗಿಯೇ ಮಹಿಳೆಗೆ ಮಹತ್ವ ಸ್ಥಾನ. ಭೂಮಿ ಕೂಡ ಫಲ ನೀಡುವ ತಾಣ. ಇದನ್ನು ಮನಗಂಡ ಮಾನವ ಭೂಮಿ ಮತ್ತು ಹೆಣ್ಣನ್ನು ಸಾಮ್ಯತೆಯ ದೇವತೆಗಳಂತೆ ಕಂಡಿದ್ದಾನೆ. ಇದಿಷ್ಟೆ ಅಲ್ಲ ಗಂಡಿನಂತೆ ಹಲವಾರು ಕೆಲಸಗಳಲ್ಲಿ ಭಾಗಿಯಾಗುವ ಮಹಿಳೆ ಒಮ್ಮೊಮ್ಮೆ ಗಂಡಿನಷ್ಟೇ ಶಕ್ತಿಶಾಲಿ. ಗಂಡನ್ನು ಅಷ್ಟೇ ಅಲ್ಲ ಊರನ್ನೂ ಕಾಪಾಡುವಷ್ಟು ಸಮರ್ಥಳಾಗಿರುತ್ತಾಳೆ. ಆ ಕಾರಣಕ್ಕಾಗಿಯೇ ದೇವತೆಗಳಾಗಿ ಪೂಜನೀಯರಾಗಿದ್ದಾರೆ. ಗ್ರಾಮ ಸಮಾಜದಲ್ಲಿ ಇಂದಿಗೂ ಪ್ರಚಲಿತ ವಿರುವ ಗ್ರಾಮ ದೇವತೆಗಳ ಸಂಖ್ಯೆ ಮತ್ತು ಸ್ವರೂಪವನ್ನು ಗಮನಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ.

ಒಟ್ಟಾರೆ ಮಹಿಳೆ ಆದಿಮಾನವನ ಆರಂಭಿಕ ದಿನಗಳಲ್ಲಿ ತನ್ನ ಶಕ್ತಿ ಸಾಮರ್ಥ್ಯ ಹಾಗೂ ಪಾತ್ರ ನಿರ್ವಹಣೆಯಲ್ಲಿ ಮಹತ್ವದ ಅಸ್ತಿತ್ವವನ್ನು ಸ್ಥಾಪಿಸುವುದರ ಮೂಲಕ ಸಮಾನತೆಯ ಸ್ಥಾನವನ್ನು ಪಡೆದಿದ್ದಳು. ಆದರೆ ಬರು ಬರುತ್ತಾ ಮಹಿಳೆಯನ್ನು ಅಡುಗೆಮನೆಗೆ ಮಾತ್ರ ಸೀಮಿತ ಮಾಡಿದ್ದರಿಂದ ಹಿಂದಿನ ಸ್ಥಾನಮಾನ ಕಳೆದುಕೊಂಡು ಹಿನ್ನೆಲೆಗೆ ಸರಿಯುವಂತಾಯಿತು. ಈ ಕುರಿತಂತೆ ಸಾಕಷ್ಟು ಚಿಂತನೆಗಳು ನಡೆದಿದ್ದು ಅದರಿಂದ ಹೊರ ಬಂದ ಸಂದೇಶವಿಷ್ಟು: ಮೂಲ ವೃತ್ತಿ ಸಂಸ್ಕೃತಿಯಲ್ಲಿ ಹೆಣ್ಣು ದುರ್ಬಲೆಯಲ್ಲ. ಅವಳ ಎಲ್ಲಾ ಉತ್ಪಾದನೆಗಳು 'ಮೂಲ–ಪಾವಿತ್ರ್ಯ, ಪೂಜೆ, ವ್ಯಾಪಾರ, ಕೈಗಾರಿಕಾ ಸಂಸ್ಕೃಇಗಳ ಹುಟ್ಟಿನೊಂದಿಗೆ ಅಂದರೆ ಎರಡನೇ ಹಂತದ ವೃತ್ತಿಗಳ ಉದಯದೊಂದಿಗೆ ಅವಳ ಪಾವಿತ್ರ್ಯ ಅವುಗಳಿಗೆ ವರ್ಗವಾಗಿ ತಾನು ಹಿಂದೆ ತಳಲ್ಪಟ್ಟಿದ್ದಾಳೆ. ಡಿ ಜನರೇಟ್ ಆಗಿ ಸೇವಕಿಯಾಗಿದ್ದಾಳೆ.

## ಆರ್ಥಿಕ ಆಯಾಮಗಳು

ಜನಪದ ಸಮಾಜಗಳಲ್ಲಿ ಆರಂಭದಿಂದಲೂ ಒಂದು ರೀತಿಯ ಆರ್ಥಿಕ ನೀತಿ ಇದ್ದೇ ಇತ್ತು. ಅದು ವಸ್ತುವಿನಿಮಯ ಪದ್ಧತಿ ಇರಬಹುದು. ಆಯಗಾರರ ಕಲ್ಪನೆ ಇರಬಹುದು. ಮುಯ್ಯಿ ತೀರಿಸುವ ಪದ್ಧತಿಗಳಿರಬಹುದು. ಈ ಸಮಾಜಗಳ ಆರ್ಥಿಕತೆಗೆ ಸೀಮಿತ ವ್ಯಾಪ್ತಿಯಿದ್ದು ಒಂದು ಸಮುದಾಯದ, ಒಂದು ಊರಿನ ಅಗತ್ಯತೆಯನ್ನು ಈಡೇರಿಸುವ

ಉದ್ದೇಶವಿರುತ್ತಿತ್ತು. ಇಂಥ ಸ್ವರೂಪದಲ್ಲಿ ರೂಪತಳೆದಿದ್ದ ಜಾನಪದ ಆರ್ಥಿಕ ವ್ಯವಸ್ಥೆಯನ್ನು ಕುರಿತ ಸ್ಪಷ್ಟ ತಿಳುವಳಿಕೆ ನಮಗೆ ಇಲ್ಲವಾಗಿದೆ. ಹಾಗಾಗಿಯೇ ಆರ್ಥಿಕತೆ ಎನ್ನುವುದು ಆಧುನಿಕ ಕಾಲದ ಫಲ ಎಂದು ತಪ್ಪಾಗಿ ಭಾವಿಸಲಾಗಿದೆ. ಇದರಿಂದ ಅಪಾಯಗಳಿಲ್ಲದ ಆರ್ಥಿಕತೆಯನ್ನು ಕಲ್ಪಿಸಿಕೊಳ್ಳುವುದು ನಮಗೆ ಕನಸಾಗಿದೆ. ಅಪಾಯವಿಲ್ಲದ ಆರ್ಥಿಕತೆಯನ್ನು ಗಮನಿಸಿ ಮರು ಅಳವಡಿಸಿ ಕೊಳ್ಳುವುದು ಇಂದಿನ ತುರ್ತು ಎನಿಸುತ್ತಿದೆ. ಕನ್ನಡ ಜನಪದಗಳ ಆರ್ಥಿಕತೆಯ ಪ್ರಮುಖ ಲಕ್ಷಣಗಳನ್ನು ಹೀಗೆ ಗುರುತಿಸಬಹುದು. ಪರಿಸರ ಸ್ನೇಹಿ ಕಾಯಕ ನಿಷ್ಠೆ, ಶ್ರಮ ಸಹಿತ ದುಡಿಮೆ, ಸಂಪತ್ತಿನ ವಿಕೇಂದ್ರೀಕರಣ, ವೃತ್ತಿ ಸಮಾನತೆ, ಸರಳ ಜೀವನ ಇವೇ ಮುಂತಾದವು.ಈ ಲಕ್ಷಣಗಳನ್ನು ಸಂಕ್ಷಿಪ್ತವಾಗಿ ವಿವರಿಸಿಕೊಳ್ಳಬಹುದು.

ಜನಪದರ ಆರ್ಥಿಕತೆ ಪ್ರಕೃತಿ ಕೇಂದ್ರಿತವಾದುದು. ಪರಿಸರ ಸ್ನೇಹಿಯಾದುದು. ಅಂದರೆ ತಾವು ಮಾಡುವ ಆರ್ಥಿಕ ಚಟುವಟಿಕೆಗಳಿಂದ ಪ್ರಕೃತಿಗೆ ಯಾವುದೇ ರೀತಿಯ ಹಾನಿಯುಂಟಾಗಬಾರದು ಎಂಬ ಭಾವನೆ ಇಲ್ಲಿ ಪ್ರಧಾನ. ಇವರು ಯಾವುದೇ ವೃತ್ತಿ ಮಾಡಿದಾಗಲೂ ಅಲ್ಲಿ ಅವರು ಬಳಸುವ ವಸ್ತುಗಳನ್ನು ಮರು ಸೃಷ್ಟಿ ಹಾಗೂ ಮರುಬಳಕೆಗೆ ಅನುಕೂಲವಾಗುವಂತೆ ಬಳಸುತ್ತಾರೆ. ಈ ಹೊತ್ತಿನ ರೀತಿ ಬಳಸಿ ಬಿಸಾಕುವ 'Use and Through' ಕ್ರಮ ಇವರದಲ್ಲ. ಉದಾ: ಒಂದು ಮಡಿಕೆ ತೆಗೆದುಕೊಳ್ಳಿ ಅದನ್ನು ಮೊದಲು ಅಡಿಗೆ ಮಾಡಲು, ನೀರು ತುಂಬಲು ಬಳಸುತ್ತಾರೆ. ಬಳಸುತ್ತಾ ಅದು ತೂತಾದಾಗ ಅದನ್ನು ಕಾಳು ತುಂಬಿಡಲು ಅಥವಾ ಏನನ್ನಾದರೂ ವಸ್ತುಗಳನ್ನು ಸಂಗ್ರಹಿಸಿಡಲು ಬಳಕೆ ಮಾಡಲಾಗುತ್ತದೆ. ಕಾಳು–ಕಡ್ಡಿ ಸಂಗ್ರಹಿಸಲು ಆಗದಷ್ಟು ರಂದ್ರಗಳು ದೊಡ್ಡವುಗಳಾದರೆ ಅದನ್ನು ಹೊಲದಲ್ಲಿ ಬೆದರುಗೊಂಬೆ ಮಾಡಲು ಉಪಯೋಗಿಸುತ್ತಾರೆ. ಅದಕ್ಕೂ ಬರದಂತೆ ಚೂರು ಚೂರಾಗಿ ಒಡೆದರೆ ಮನೆಯ ಯಾರಾದರೂ ವ್ಯಕ್ತಿಗಳಿಗೆ/ಸದಸ್ಯರಿಗೆ ನಿವಾಳಿಸಿ ಎಸೆಯುವ ಶಾಸ್ತ್ರಕ್ಕೆ ಬಳಸುತ್ತಾರೆ. ಅದರ ನಂತರ ರೈತ ಮಹಿಳೆ ಶೇಂಗಾ ಕೆದರಲು ಬಳಸುತ್ತಾಳೆ. ಇದರ ನಂತರವೂ ಮಕ್ಕಳು ಚಿಕ್ಕ ಮಡಿಕೆ ಚೂರನ್ನು ತೂರಾ ಬಿಲ್ಲೆ ಆಟ ಆಡಲು ಬಳಸುತ್ತಾರೆ. ಇಂಥ ಅನೇಕ ಉದಾಹರಣೆಗಳನ್ನು ಇಲ್ಲಿ ಕಾಣಬಹುದಾಗಿದೆ. ಇದರಿಂದ ತಿಳಿದು ಬರುವ ಸಂಗತಿಗಳೆಂದರೆ ಜನಪದದ ಆರ್ಥಿಕತೆ ಮುಖ್ಯವಾಗಿ ಅವರ ವೃತ್ತಿಗಳು ಮತ್ತು ಸೇವಾ ಮನೋಭಾವಗಳ ತಳಹದಿಯ ಮೇಲೆ ರೂಪುಗೊಂಡಿದ್ದು ಪ್ರಕೃತಿಗೆ ಘಾಸಿಗೊಳಿಸುವ ಅಥವಾ ಪ್ರಕೃತಿಯನ್ನೆ ನಾಶಗೊಳಿಸುವ ಯಾವುದೇ ಕೆಲಸಗಳು ಇಲ್ಲಿ ನಡೆಯುವುದಿಲ್ಲ.

ಜನಪದ ಆರ್ಥಿಕ ಜೀವನದಲ್ಲಿ ದೇಹ ಶ್ರಮವೇ ಜೀವಾಳ "ಕೂತು ತಿಂದರೆ ಕುಡಿಕೆ ಹೊನ್ನು ಸಾಲದು" ಎಂಬುದು ಇಲ್ಲಿನ ಪ್ರಧಾನ ನಂಬಿಕೆ. ಹಾಗಾಗಿ ಇವರಿಗೆ ದೇಹ ಬಗ್ಗಿಸಿ ಕೆಲಸ ಮಾಡುವುದು ಆನಂದದಾಯಕ ಕಾರ್ಯ. ಹೀಗೆ ದುಡಿಯದಿದ್ದರೆ ಇವರಿಗೆ ಮೈನೋವು. ಹಾಗಾಗಿ ಜನಪದ ಬದುಕಿನೊಳಗೆ ದುಡಿಮೆ ಒಂದು ಬಹುದೊಡ್ಡ ಮೌಲ್ಯವಾಗಿದೆ. ಆದ್ದರಿಂದಲೇ ಮನುಷ್ಯನಾಗಿ ಹುಟ್ಟಿದವನಿಗೆ ಶ್ರಮವಿಲ್ಲದೆ ತಿಂದು ಜೀವಿಸುವುದು ಒಂದು ಅಪರಾಧ ಎಂಬುದು ಇಲ್ಲಿ ತಿಳುವಳಿಕೆ. 'ಮಾಡಿದವ ಉಂಡ ಮಲಗಿದವ ಕೆಟ್ಟ' ಎಂಬ ಅನುಭವ ಮಾತು ಮೆಲಿನ ಎಲ್ಲಾ ವಿಚಾರಗಳನ್ನು ಸರಿಯಾಗಿಯೇ ಪ್ರತಿಪಾದಿಸುತ್ತದೆ. ದೇಹ ಶ್ರಮ ಮಾನವನ ಉನ್ನತಿಗೆ ಉತ್ತಮ ಮೆಟ್ಟಿಲು ಎಂಬ ಸದಾಶಯದೊಂದಿಗೆ ತಮ್ಮ ಜೀವನ ಸಾಗಿಸುವ ಜನಪದರು 'ಆಳಾಗ ಬಲ್ಲವ ಅರಸಾಗ ಬಲ್ಲ' ಎಂಬುದನ್ನು ಬದುಕಿ ತೋರಿಸಿದ್ದಾರೆ. ಇಂಥ ಕಾರಣಗಳಿಂದಾಗಿಯೇ ಪರಂಪರೆಯಲ್ಲಿ ಬೆವರು ಸುರಿಸಿ ದುಡಿವ ಕುಟುಂಬ ಹಾಗೂ ವ್ಯಕ್ತಿಗಳಿಗೆ ದೊಡ್ಡ ಗೌರವವಿದೆ. ಆದರೆ ಈ ಮೌಲ್ಯ ನಂತರದ ದಿನಗಳಲ್ಲಿ ಬದಲಾಗಿರುವುದನ್ನು ಕಾಣುತ್ತಿದ್ದೇವೆ. ಬದಲಾದ ಕಾಲಮಾನದಲ್ಲಿ ಈ ಮೌಲ್ಯ ತಿರುವು–ಮುರುವು ಆಗಿದ್ದು ಕೂತು ತಿನ್ನುವ, ಬೆವರಿಲ್ಲದ ದುಡಿವ, ಬಿಳಿಕೊಳಪಟ್ಟಿಯ ಉದ್ಯೋಗಸ್ಥರಿಗೆ ಇಂದು ಇನ್ನಿಲ್ಲದ ಪ್ರಾಮುಖ್ಯತೆ ಸಿಕ್ಕಿಬಿಟ್ಟಿದೆ.

ದುಡಿಮೆಯ ಮೌಲ್ಯವಾಗಿದ್ದ ಜನಪದ ಸಮಾಜದೊಳಗೆ ದುಡಿಮೆಯ ಕ್ಷೇತ್ರಗಳು ಎಷ್ಟೊಂದು!? ಉದಾ: ಕೃಷಿಯಂಥ ಕ್ಷೇತ್ರವನ್ನೆ ನೋಡಿ ಇಲ್ಲಿ ಎಲ್ಲಾ ವಯೋಮಾನದ ವ್ಯಕ್ತಿಗಳಿಗೂ ದುಡಿಯುವ ಅವಕಾಶವಿದೆ. ಉಳುಮೆ, ಬಿತ್ತನೆ, ಕಳೆತೆಗೆಯುವುದು, ಕಟಾವು, ಕಣದ ಕೆಲಸಗಳು ಇತ್ಯಾದಿ. ಒಟ್ಟಾರೆ ಜನಪದರ ಸಂಸ್ಕೃತಿಯು ನಿಂತಿರುವುದೇ ಶ್ರಮದ ನೆರಳಲ್ಲಿ; ಶ್ರಮದ ಅಡಿಪಾಯದಲ್ಲಿ ಎಂದರೆ ತಪ್ಪಾಗಲಾರದು. ಎಂಥದ್ದೇ ಕೆಲಸವನ್ನು ಸಮಾನ ಗೌರವದಿಂದ ಕಂಡ ಅದ್ಭುತ ಲೋಕವಿದು. ಮೂಲ ಮಾನವನ ಬದುಕಿನಲ್ಲಿದ್ದ ಆಯಾಗಾರರ ಕಲ್ಪನೆಯನ್ನು ಗಮನಿಸಿ ಆ ವ್ಯವಸ್ಥೆಯಲ್ಲಿ ಕೃಷಿ ಮಾಡುವ ರೈತನಷ್ಟೇ ನೇಯುವ ನೇಕಾರನಿಗೂ, ಹೊಲೆಯುವ ಮಾದಿಗನಿಗೂ ಗೌರವದ ಸ್ಥಾನಮಾನಗಳು ದಕ್ಕಿವೆ. ಜನಪದ ಬದುಕಿನೊಳಗೆ ಉಸಿರಾಡುವ ಇಂಥ ಮೌಲ್ಯಗಳಿಗೆ ಕೊರತೆಯಿಲ್ಲ. ಮಾಡುವ ವೃತ್ತಿಯನ್ನು ಗೌರವದಿಂದ ಮಾಡಬೇಕೆಂಬುದು ಇಲ್ಲಿಯ ಬಹುಮುಖ್ಯ ಆಶಯವಾಗಿದ್ದು, ಇಂಥ ಭಾವನೆಯನ್ನು ಈ ಕೆಳಗಿನ ತ್ರಿಪದಿಯೊಂದು ಹೀಗೆ ಬಿಂಬಿಸುತ್ತದೆ.

ಕಸವು ಹೊಡೆದ ಕೈಯು ಕಸ್ತೂರಿ ನಾತಾವ।
ಬಸವಣ್ಣ ನಿನ್ನ ಸಗಣೇಯ । ಬಳದ ಕೈ
ವಿಸಳ ಯಾಲಕ್ಕಿ ಗೊನಿ ನಾತ ॥

ಇಂಥ ಚರಿತ್ರೆಯೊಂದಿರುವ ಕನ್ನಡ ನಾಡಿನೊಳಗೆ ಆಧುನಿಕತೆಯ ಪ್ರಭಾವದಿಂದ ದೇಹ ಶ್ರಮವನ್ನು ಗೌಣ ಮೌಲ್ಯದಂತೆ ಕಾಣುತ್ತಿರುವುದು ವಿಷಾದನೀಯ. ದೇಹ ಶ್ರಮದಿಂದ ದೂರ ಸರಿದ ಇಂದಿನ ಜನ ಆರೋಗ್ಯವನ್ನು ಕಳೆದುಕೊಂಡಿರುವುದು ಗಮನಿಸಬೇಕಾದ ಸಂಗತಿ. ಆರೋಗ್ಯಕ್ಕಾಗಿ ದೇಹ ಶ್ರಮವನ್ನು ವ್ಯರ್ಥಮಾಡುತ್ತಿರುವ ಇಂದಿನ ಸಂದರ್ಭಕ್ಕೆ ಏನನ್ನ ಬೇಕೋ ತಿಳಿಯದು. ಆರೋಗ್ಯ – ಆಹಾರವನ್ನು ನೀಡುತ್ತಿದ್ದ ದೇಹ ಶ್ರಮದ ತೀವ್ರ ಕೊರತೆಯನ್ನು ಇಂದು ನಾವು ಅನುಭವಿಸುತ್ತಿದ್ದೇವೆ. ಇದೇ ಕಾಲಕ್ಕೆ ಶ್ರಮರಹಿತ ಉದ್ಯೋಗ ಕ್ಷೇತ್ರಗಳು ತೀವ್ರ ಒತ್ತಡದಲ್ಲಿ ಸಿಕ್ಕಿಕೊಂಡಿವೆ. ಇಂಥ ಅಸಮತೋಲನದ ಕಾರಣದಿಂದಾಗಿಯೇ ಸಮಾಜದ ಸರ್ವತೋಮುಖ ಅಭಿವೃದ್ಧಿ ಸಾಧ್ಯವಾಗದೆ ಅನೇಕ ಸಮಸ್ಯೆಗಳಿಗೂ ಕಾರಣವಾಗಿದೆ.

ಕನ್ನಡ ಜನಪದ ಸಂಸ್ಕೃತಿಯ ಸಾಮಾನ್ಯ ಲಕ್ಷಣಗಳಲ್ಲಿ ಭೌತಿಕ ಸಂಪತ್ತಿನ ನಿರಾಕರಣೆಯೂ ಒಂದಾಗಿದೆ. ಹಾಗೆಯೇ ಬೌದ್ಧಿಕ ಅಂದರೆ ಆಂತರಿಕ ಗುಣ ಸಂಪನ್ನತೆಯನ್ನು ಪಡೆಯುವ ಗುಣವೂ ಇದೆ. ಆದ್ದರಿಂದಲೇ ಜನಪದ ಜೀವನದಲ್ಲಿ ಬಾಹ್ಯ ಸಂಪತ್ತಿಗಿಂತ ಆಂತರಿಕ ಸಂಪತ್ತಿಗೆ ಹೆಚ್ಚಿನ ಬೆಲೆಯಿದೆ. ಒಬ್ಬ ವ್ಯಕ್ತಿಯ ಬಳಿ ಎಷ್ಟು ಹಣವಿದೆ ಆಸ್ತಿಯಿದೆ ಎನ್ನುವುದಕ್ಕಿಂತ ಎಷ್ಟು ಗುಣ ಸಂಪನ್ನನಾಗಿದ್ದಾನೆ ಎಂಬುದು ಬಹಳ ಮುಖ್ಯವಾಗುತ್ತದೆ. ಇವರು ಬದುಕಿನೊಳಗೆ ಬಾಹ್ಯ ಸಂಪತ್ತು ಕ್ಷಣಿಕವೂ ಆಂತರಿಕ ಸಂಪತ್ತು ಶಾಶ್ವತವೂ ಎಂಬ ಸ್ಪಷ್ಟ ಕಲ್ಪನೆಯಿದೆ. ಹಾಗಾಗಿಯೇ ಅನೇಕ ಜಾನಪದ ಅಭಿವ್ಯಕ್ತಿಗಳಲ್ಲಿ ಇಂಥ ಭಾವಗಳು ವ್ಯಕ್ತವಾಗಿವೆ. ಗರತಿಯೊಬ್ಬಳು ಹೇಳುವ ತ್ರಿಪದಿಯೊಂದನ್ನು ಗಮನಿಸಿ.

ಬಂಗಾರ ಬಳಿಯಿದ್ರೆ ಬೈ ಬೇಡ ಬಡವರಿಗೆ ।
ಬಂಗಾರ ನಿನಗೆ ಸ್ಥಿರವಲ್ಲ । ಮಧ್ಯಾಹ್ನದ ।
ಬಿಸಿಲು ಹೊರಳುವುದು ತಡವಲ್ಲ ॥

ಬಂಗಾರದಂತಹ ಸಂಪತ್ತು ಮಧ್ಯಾಹ್ನದ ಬಿಸಿಲಿನಂತೆ ಕ್ಷಣಿಕ ಎಂಬ ಅರ್ಥ ಇಲ್ಲಿದೆ. ಹಾಗಾದರೆ ಇವರು ಬಯಸುವ ಆಂತರಿಕ ಸಂಪತ್ತು ಎಂಥದ್ದು? ಎಂದರೆ ಅದಕ್ಕೆ ಮತ್ತೊಂದು ತ್ರಿಪದಿ ಸರಳವಾಗಿ ಹೀಗೆ ಉತ್ತರಿಸುತ್ತದೆ.

ಮುತ್ತು ಮಾಣಿಕ ಬೇಡ ಮತ್ತೆ ಸಂಪದ ಬೇಡ ।
ಸುತ್ತು ಕೋಟಿಯ ವೈಭವ ಬೇಡ । ನನ್ನವ್ವ
ಸುತ್ತೆಲ್ಲ ಜನಪದ ಹಾಡಿರಲಿ ॥

ಇಲ್ಲಿನ ಮಾತುಗಳಲ್ಲಿ ಬಾಹ್ಯ ಸಂಪತ್ತಿಗೆ ಪರ್ಯಾಯವಾಗಿ 'ಜನಪದ ಹಾಡು' ಇರಲಿ ಎಂಬುದಾಗಿ ಆಶಿಸಲಾಗಿದೆ. ಇದನ್ನು ಸರಳವಾಗಿ ಅರ್ಥೈಯಿಸದೆ ಗಂಭೀರವಾಗಿ ಆಲೋಚಿಸಿದರೆ ಜನಪದ ಹಾಡು ಎಂಬುದಕ್ಕೆ ವಿಶೇಷ ಅರ್ಥ ಹೊಳೆಯುತ್ತದೆ. ಜನಪದ ಹಾಡು ಕೇವಲ ಅಕ್ಷರಗಳ ಸಂಯೋಜನೆಯಲ್ಲ; ರಾಗರಚನೆಯಲ್ಲ ಇವುಗಳಾಚೆಗಿನ ಅರ್ಥವಿದ್ದು ಅದೆಂದರೆ ಜನಪದ ಹಾಡೆಂದರೆ ಜನ–ಜೀವನದ ಮಾನವೀಯ ಮೌಲ್ಯಗಳ ಮಾರ್ಗದರ್ಶಿ ಇದರಲ್ಲಿ ಸುಖೀ ಬದುಕಿಗೆ ಅಗತ್ಯವಾದ ಸಮಗ್ರ ಸೂತ್ರಗಳಿವೆ.

'ಮಂಟೇಸ್ವಾಮಿ' ಜನಪದ ಮಹಾಕಾವ್ಯದಲ್ಲಿ ಜನಪದರ ಈ ಮೌಲ್ಯಗಳ ಸಮಗ್ರ ವಿವರಗಳಿವೆ. ಸಾಂಸ್ಕೃತಿಕ ನಾಯಕನಾದ ಮಂಟೇಸ್ವಾಮಿ ತನ್ನ ಪರಂಪರೆಯನ್ನು ಕಟ್ಟಲು ಬಯಸಿದ್ದು ಹಣ–ಆಸ್ತಿಗಳಿಂದಲ್ಲ. ಮುಖ್ಯವಾಗಿ ಮಾನವೀಯ ಸ್ವರೂಪದ ಸಂಪನ್ಮೂಲಗಳನ್ನು. ಹಾಗಾಗಿ ಭಿಕ್ಷೆಗೆ ಹೋದ ಮಂಟೇಸ್ವಾಮಿಗೆ ಯಾರಾದರು ಹಣವನ್ನೋ, ಧಾನ್ಯವನ್ನೋ ನೀಡಿದರೆ ಅದನ್ನು ಸ್ಪಷ್ಟವಾಗಿ ನಿರಾಕರಿಸುತ್ತಾನೆ. ಈ ಸಂಪತ್ತು ಏನಿದ್ದರೂ ನಿರ್ಜೀವ ಸ್ಥಿತಿಯದ್ದು. ಹಾಗಾಗಿ ನನಗೆ ಅಂಥ ಭಿಕ್ಷೆ ಬೇಡ. ನನಗೆ ಬೇಕಿರುವುದು ಮಾತನಾಡುವ ಭಿಕ್ಷೆ ಎನ್ನುತ್ತಾನೆ. ಅಂದರೆ ಮಾನವ ಸಂಪನ್ಮೂಲ. ಇಲ್ಲಿ ಗಮನಿಸಬೇಕಾದ ಮತ್ತೊಂದು ಮಹತ್ವದ ಸಂಗತಿ ಎಂದರೆ ಮಂಟೇಸ್ವಾಮಿಗೆ ಶತ್ರುಗಳೆನಿಸಿದವರೆಲ್ಲರೂ ಭೌತಿಕ ಆಸ್ತಿ–ಅಂತಸ್ತುಳ್ಳ ಶ್ರೀಮಂತರು. ಉದಾ: ಪಾಂಚಾಳರು, ಕೆಂಪಾಚಾರಿ, ಮುದ್ದಮ್ಮ ಇಂಥ ಶ್ರೀಮಂತರ ಸೊಕ್ಕು ಮುರಿದು ಶ್ರೀಮಂತಿಕೆಗೆ ಸಮಾಜದಲ್ಲಿ ಯಾವ ಬೆಲೆಯೂ ಇಲ್ಲ ಎಂಬ ಅರಿವು ಮೂಡಿಸುವುದು ಮಂಟೇಸ್ವಾಮಿಯ ಪ್ರಮುಖ ಗುರಿಯಾಗಿದೆ.

ಇಂಥ ಮೌಲ್ಯಯುತ ಸಮಾಜ ಇಂದು ತಲುಪಿರುವ ಸ್ಥಿತಿ ಎಂಥವರನ್ನು ಚಿಂತೆಗೀಡು ಮಾಡುತ್ತದೆ. ಈ ಹೊತ್ತಿನ ಸಮಕಾಲೀನ ಸಮಾಜದ ಆಕರ್ಷಕ ಸಂಗತಿ ಎಂದರೆ ಹಣ–ಆಸ್ತಿಗಳ ಸಂಪಾದನೆ. ಸಂಪಾದನೆಯ ಮಾರ್ಗ ಯಾವುದಾದರೂ ಸರಿ ಶ್ರೀಮಂತರಾಗಬೇಕಷ್ಟೆ. ಇಂಥ ಮನೋಭಾವಗಳಿಂದಾಗಿ ಇಂದಿನ ಸಾಮಾಜಿಕ ಪರಿಸ್ಥಿತಿಗಳು ಈ ಸ್ಥಿತಿಗೆ ತಲುಪಿವೆ.

ರಾಜಕೀಯ ಸ್ಥಿತಿ

ಜನಪದ ಜೀವನದಲ್ಲಿ ಅದರದೇ ಆದ ರಾಜಕೀಯ ಪರಿಸ್ಥಿತಿ ಜಾರಿಯಲ್ಲಿರುವುದಕ್ಕೆ ಅನೇಕ ರೀತಿಯ ಆಧಾರಗಳಿವೆ. ಇಂದಿನ ಕಾಲದ ರಾಜಕೀಯ ವಿದ್ಯಾಮಾನಗಳಂತೆ ಬಹುದೊಡ್ಡ ಸ್ಥಾನದಲ್ಲಿ ರಾಜಕೀಯ ಪರಿಸ್ಥಿತಿ ಇರಲಿಲ್ಲ. ಈ ದೇಶ ವಸಾಹತು ನೀತಿಗೆ ಒಳಗಾದ ನಂತರದ ದಿನಗಳಲ್ಲಿ ಜನಸಾಮಾನ್ಯರು ನೇರವಾಗಿ ಸಕ್ರಿಯ ರಾಜಕಾರಣದಲ್ಲಿ ಪಾಲ್ಗೊಳ್ಳುವಂತಾಗಿ ತಮ್ಮದೇ ಆದ ರಾಜಕೀಯ ನಿಲುವುಗಳು ಸ್ಪಷ್ಟವಾಗುತ್ತಾ ಹೋಗುತ್ತವೆ. ಜನಪದ ಸಮಾಜಗಳ ಆರಂಭದ ಸ್ಥಿತಿಯಲ್ಲಿ ಸ್ಥಾನಿಕ ಆಡಳಿತ ವಿಶಿಷ್ಟ ರೂಪ ಪಡೆದಿದ್ದು, 'ಆಡಳಿತವು ಗೌಡ, ಶಾನುಭೋಗ, ತಳವಾರ, ನೀರುಗಂಟಿ, ಮಣೆಗಾರ, ಚಮ್ಮಾರ, ಅಗಸ, ಕಮ್ಮಾರ ಮೊದಲಾದ ಆಯಗಾರರಿಂದ ಕೂಡಿದ ವ್ಯವಸ್ಥೆಯಾಗಿತ್ತು' ಇವರು ಬದುಕಿನಲ್ಲಿ 'ಧರ್ಮ ಮತ್ತು ರಾಜಕಾರಣಗಳು ಮಕ್ಕಳ ಬದುಕನ್ನು ತಮ್ಮ ನಿಯಂತ್ರಣದಲ್ಲಿರಿಸಿಕೊಂಡ ವ್ಯವಸ್ಥೆಯೂ ಇತ್ತು. ಸಂಸ್ಥಾನಿಕರು, ಪಾಳೆಯಗಾರರು, ರಾಜರುಗಳು ಹಲವು ಬಗೆಯ ಕರ ಕಂದಾಯಗಳನ್ನು ಹೇರಿ ಜನಸಾಮಾನ್ಯರ ಬದುಕನ್ನು ಇಕ್ಕಟ್ಟಿಗೆ ಗುರಿಪಡಿಸಿದ್ದರು. ಊಳಿಗಮಾನ್ಯ ಪದ್ಧತಿ ರೂಢಿಯಲ್ಲಿತ್ತು. ಯಜಮಾನ ಸಂಸ್ಕೃತಿಯು ಆಳರಸರ ತುತ್ತೂರಿಯಾಗಿತ್ತು. ಜನ ಸಾಮಾನ್ಯರ ಸಂಪರ್ಕಕ್ಕೆ ಬಾರದೆ ಜನ ದೂರ ಪಟ್ಟಣಗಳಲ್ಲಿ ವೈಭವದ ಬದುಕು ನಡೆಸುತ್ತಿದ್ದ ಆಳರಸರ ತೆವಲುಗಳಿಗೆ, ರಣೋತ್ಸಾಹಗಳಿಗೆ ಅಧಿಕಾರ, ರಾಜ್ಯದಾಹಗಳಿಗೆ ಜನಸಾಮಾನ್ಯರು ಚದುರಂಗದ ಕಾಯಿಗಳಾಗಿದ್ದರು'

ಆದರೂ ಜನಪದ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೆಲವು ಸಾಮಂತರು, ಪಾಳೆಗಾರರು ಹಾಗೂ ಅರಸರ ಬಗ್ಗೆ ದಾಖಲಾಗಿರುವ ವಿಷಯಗಳನ್ನು ಗಮನಿಸಿದರೆ ರಾಜಪ್ರಭುತ್ವದ ನಾಯಕರು ಕೇವಲ ದರ್ಪ–ದೌರ್ಜನ್ಯಗಳಲ್ಲೇ ಬದುಕಿದರು ಎಂದು ಹೇಳಲಾಗದು. ಜನಸಾಮಾನ್ಯರಿಗೆ ಬಂದ ಕಷ್ಟ ಸುಖಗಳಲ್ಲಿ ಭಾಗಿಯಾಗುತ್ತ ಸ್ಪಂದಿಸಿದ ಅರಸರು – ಪಾಳೇಗಾರರೂ ಇದ್ದಾರೆ. ಇವರನ್ನು ಕುರಿತಂತೆ ತಮ್ಮ ಹಾಡುಗಳ ಮೂಲಕ ಕೊಂಡಾಡಿಸಿಕೊಂಡ ಪ್ರಭುಗಳಲ್ಲಿ ಕೆಂಪೇಗೌಡ, ಸರ್ಜಪ್ಪನಾಯಕ, ಸಿಂಧೂರ ಲಕ್ಷಣ, ಕುಮಾರರಾಮ, ಹಲಗಲಿಬೇಡರು, ದೊಂಡಿಯ ವಾಘ ಅವರು ಮುಖ್ಯರಾಗಿದ್ದಾರೆ. ಇಲ್ಲಿ ಗಮನಿಸಬೇಕಾದ ಸಂಗತಿ ಎಂದರೆ ಮೇಲೆ ವಿವರಿಸಿದ ರಾಜರೆಲ್ಲರೂ ಸಾಮಾನ್ಯ ಕುಟುಂಬಗಳಿಂದ ಬಂದವರು ಅಥವಾ ಸಾಮಾನ್ಯ ಕುಟುಂಬಗಳ ಬಗ್ಗೆ ಕಾಳಜಿ ಹೊಂದಿದವರು. ಪ್ರಭುತ್ವದ ಚರಿತ್ರೆಯನ್ನು ಗಮನಿಸಿದರೆ 'ಜನಸಾಮಾನ್ಯರು ತಮ್ಮ ದೇಶಭಕ್ತಿ ಹಾಗೂ ಕಲಿತನಗಳಿಂದಾಗಿ ಈ ನೆಲದಲ್ಲಿ ಅಜರಾಮರರಾಗಿದ್ದಾರೆ. ಕೆಳವರ್ಗಕ್ಕೆ ಸೇರಿದ ಭಜಂತ್ರಿಗಳು, ಮಾದಿಗರು ಈ ನೆಲವನ್ನಾಳಿದ ಉಲ್ಲೇಖಗಳನ್ನು ಜನಪದ ಸಾಹಿತ್ಯ ದಾಖಲು ಮಾಡಿದೆ'.

ಜನಪದರು ಪ್ರಭುತ್ವಕ್ಕೆ ಅಪ್ಪುಗೆ ಮತ್ತು ವಿರೋಧದ ಎರಡೂ ರೀತಿಯ ಪ್ರತಿಕ್ರಿಯೆಗಳನ್ನು ನೀಡಿದ್ದಾರೆ. ತಮ್ಮ ಮೌಲ್ಯಗಳಿಗೆ ವಿರುದ್ಧ ನಡೆಯುವ ರಾಜರಾದರೆ ಅವರನ್ನು ಯಾವುದೇ ಮುಲಾಜಿಲ್ಲದೆ ಟೀಕಿಸಿದ್ದಾರೆ. ಅಧಿಕಾರ ಇರುವುದು ಜನರ ಒಳಿತಾಗಿ ಹೊರತು ವೈಯುಕ್ತಿಕ ಹಿತಾಸಕ್ತಿಗೆ ಅಲ್ಲ ಎಂಬುದನ್ನು ಗಟ್ಟಿಯಾಗಿ ಪ್ರತಿಪಾದಿಸಿದ್ದಾರೆ. ಇದನ್ನು ಮೀರಿ ನಡೆದ ರಾಜ್ಯತ್ವಕ್ಕೆ ಮಾತಿನ ಚಾಟಿಯನ್ನು ಬೀಸುವ ಕೆಲಸವೂ ನಡೆದಿದೆ. ಈ ಹಿನ್ನೆಲೆಯಲ್ಲಿ ಮೂಡಿಬಂದ ತ್ರಿಪದಿಯೊಂದನ್ನು ಗಮನಿಸಿ.

ಅನ್ನೇಕಾರ ಅರಸು ನಿನ್ನ ಸಂಬಳ ಸಾಕು ।
ಹನ್ನೆರಡು ವರ್ಷದ ಹಳೆ ಅಕ್ಕಿ–ಅನ್ನ ಉಂಡು ।
ಚನ್ನೀಗ ನನ ತಮ್ಮ ಬಡವಾದ ॥

ಜನಪದ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಮಾನವ ಅಭಿವೃದ್ಧಿಗೆ ಮಾರಕವಾದ ಪ್ರಭುತ್ವವನ್ನು ಟೀಕಿಸುವುದು, ವಿರುದ್ಧ ಪ್ರತಿಭಟಿಸುವುದು ಮಾತ್ರವಲ್ಲ ಸಮಯ ಬಂದಾಗ ಅಂಥ ಪ್ರಭುತ್ವಗಳನ್ನು ನಾಶಗೊಳಿಸಿ ಪರ್ಯಾಯ ಪ್ರಭುತ್ವವನ್ನು ಸೃಷ್ಟಿಸುವ ಹಲವಾರು ಪ್ರಸಂಗಗಳು ದೊರೆಯುತ್ತವೆ.

ಜನಪದ ವಿಜ್ಞಾನ–ತಂತ್ರಜ್ಞಾನ

ವಿಜ್ಞಾನ–ತಂತ್ರಜ್ಞಾನಗಳು ಆಧುನಿಕತೆಯ ಕೂಸುಗಳು ಎಂಬುದಾಗಿ ಅನೇಕ ವರ್ಷಗಳಿಂದ ನಂಬಿಸಲಾಗಿದೆ. ಆದರೆ ಇದು ಪರಿಪೂರ್ಣ ಸತ್ಯವಲ್ಲ ವಿಜ್ಞಾನ–ತಂತ್ರಜ್ಞಾನ ಎಂಬ ಪದಪುಂಜಗಳು ಹಾಗೂ ಯಂತ್ರಗಳ ಅಸಾಧ್ಯದ ಬೆಳವಣಿಗೆಯನ್ನು ಹೊರತು ಪಡಿಸಿದರೆ ಉಳಿದ ಜ್ಞಾನಧಾರೆಗಳು ಹಾಗೂ ಅವುಗಳ ಪ್ರಯೋಗ ಆಧುನಿಕ ರೂಪಗಳಿಗೆ ಜನಪದ ವಿಜ್ಞಾನ ತಂತ್ರಜ್ಞಾನಗಳ ತಳಹದಿ ಹಾಗೂ ಬೇರು ಎನ್ನುವುದರಲ್ಲಿ ಅನುಮಾನವಿಲ್ಲ. ಆದರೆ ಆಧುನಿಕತೆ ಇದನ್ನು ಮರೆಮಾಚಿ ತನ್ನದೇ ಸ್ವಂತ ಸೃಷ್ಟಿ ಈ ವಿಜ್ಞಾನ–ತಂತ್ರಜ್ಞಾನ ಎಂಬುದಾಗಿ ಬಿಂಬಿಸಿದ್ದು ಮಾತ್ರ ಪರಂಪರೆಗೆ ಮಾಡಿದ ಅನ್ಯಾಯ. ಈ ಹಿನ್ನೆಲೆಯಲ್ಲಿ ಆಲೋಚನೆ ಮಾಡುವುದಾದರೆ ಆದಿ ಮಾನವನ ಸೃಷ್ಟಿ ಅದ್ಭುತ ವಿಜ್ಞಾನ. ಏಕೆಂದರೆ ಪ್ರಕೃತಿಯ ಜೊತೆ ಒಡನಾಡಿದ ಅನುಭವಗಳ ಮೂಲಕ ಕಂಡುಕೊಂಡ ವಿಶಿಷ್ಟ ಜ್ಞಾನವಿದು. ಇದರ ಶೋಧಕರು ಅಕ್ಷರಸ್ಥರಲ್ಲದೇ ಇರಬಹುದು. ಆದರೆ ಅನುಭವಿಗಳು ಮತ್ತು ಜ್ಞಾನಿಗಳು, ಬಹಳಷ್ಟು ಮಂದಿ ತಿಳಿದಿರುವಂತೆ ಜನಪದರು ಕಲೆ–ಸಂಪ್ರದಾಯ–ನಂಬಿಕೆ–ಆಚರಣೆಗಳನ್ನು ಮಾತ್ರ ಹುಟ್ಟು ಹಾಕಲಿಲ್ಲ. ಜೊತೆಗೆ ಆಹಾರ–ಔಷಧಿ ಪದ್ಧತಿಗಳು, ವಸತಿ ನಿರ್ಮಾಣದ ಕುಶಲತೆಗಳು, ಉಡುಪಿನ ಅನ್ವೇಷಣೆ, ಬೇಟೆ, ಆಯುಧಗಳು, ವ್ಯವಸಾಯ ಉಪಕರಣಗಳು, ಅಲಂಕಾರಿಕ ವಸ್ತುಗಳು, ಕುಟ್ಟಿ–ಬೀಸುವ ಉಪಕರಣಗಳು ಮತ್ತು ಪದ್ಧತಿಗಳು, ಸಾಗಾಣೆ ಸಾಧನಗಳು, ಜಲ ಸಂರಕ್ಷಣಾ ಪದ್ಧತಿಗಳು,

ಮಕ್ಕಳ ಲಾಲನೆ ಪಾಲನೆ–ಪೋಷಣೆಯ ವಿಧಾನಗಳು, ಸಸ್ಯ–ಬೀಜಗಳ ಉತ್ಪತ್ತಿ ಮತ್ತು ಸಂರಕ್ಷಣಾ ಪದ್ಧತಿಗಳು, ನ್ಯಾಯ ತೀರ್ಮಾನಕ್ಕೆ ಕಾನೂನುಗಳು, ವಿವಿಧ ರೀತಿಯ ಕಸುಬುಗಳ ಕೌಶಲ್ಯಗಳು ಇತ್ಯಾದಿ ನೂರಾರು ಅನ್ವೇಷಣೆಗಳನ್ನು ನಡೆಸಿ ತನ್ನ ಬದುಕನ್ನು ಪ್ರಗತಿಯತ್ತ ಮುನ್ನಡೆಸಿದ್ದಾರೆ. ಆದರೆ ಇಂದಿಗೆ ಇವೆಲ್ಲವೂ ಕೇವಲ ಮೌಢ್ಯಗಳೆಂದು ನಿರ್ಲಕ್ಷೆ ಮಾಡುತ್ತಿರುವುದು ಸರಿಯಾದ ಕ್ರಮವಲ್ಲ. ನಿಜವಾಗಿ ಹೇಳುವುದಾದರೆ ಇವೆಲ್ಲವೂ ಜನಪದ ವಿಜ್ಞಾನಗಳೆ. ಈ ವಿಜ್ಞಾನಗಳ ತಳಹದಿಯ ಮೇಲೆ ಆಧುನಿಕ ವಿಜ್ಞಾನ ನಿಂತಿದೆ. ಉದಾ: ಆರಂಭಕ್ಕೆ ರೈತನೊಬ್ಬ ತನ್ನ ಸಾಗಣೆಯ ಅನುಕೂಲಕ್ಕೆ ಎತ್ತಿನಗಾಡಿ ಸೃಷ್ಟಿಸಿದ ಮೂಲ ತತ್ವಗಳ ಮೇಲೆ ಅಲ್ಲವೇ ಇಂದಿನ ವಿಜ್ಞಾನ ಕಾರನು ಸೃಷ್ಟಿಸಿದ್ದು. ಹಾಗಾಗಿಯೇ ಇಂದಿನ ವಿಜ್ಞಾನದ ಯಾವ ಸೃಷ್ಟಿಯೂ ನೂರಕ್ಕೆ ನೂರರಷ್ಟು ನವೀನವಾದ, ಸ್ವತಂತ್ರವಾದ ಸೃಷ್ಟಿ ಅಲ್ಲ. ಹಾಗೆ ನೋಡಿದರೆ ಆದಿ ಮಾನವನ ಅವಿಷ್ಕಾರದ ಮೂಲ ತತ್ವಗಳನ್ನೆ ಇಂದಿನ ಆಧುನಿಕ ವಿಜ್ಞಾನಿಗಳು ಪರಿಷ್ಕರಿಸಿದರು ಎಂದೇ ಹೇಳಬೇಕಾಗುತ್ತದೆ. ಇಂಥ ಸತ್ಯಗಳನ್ನು ಅರ್ಥ ಮಾಡಿಕೊಳ್ಳದ ನಾವೆಲ್ಲರೂ ಪದವೀಧರ ವಿಜ್ಞಾನಿಗಳಿಗೆ ಹಾರ–ತುರಾಯಿಗಳನ್ನು ನೀಡಿ, ಹೊತ್ತು ಮರೆಸುತ್ತಾ ಅನುಭವದ ವಿಜ್ಞಾನಿಗಳನ್ನು ಕೀಳರಿಮೆಯಿಂದ ನರಳುವಂತೆ ಮಾಡಿದ್ದೇವೆ. ಅವರ ಜ್ಞಾನವನ್ನು ಮೂಲೆಗುಂಪಾಗಿಸಿದ್ದೇವೆ. ಹೂವನ್ನು ವರ್ಣಿಸುವ ಮುಡಿಯುವ ಬರದಲ್ಲಿ ಹೂವಿಗೆ ಕಾರಣವಾದ ಬೇರುಗಳನ್ನು ಮರೆತಂತಾಗಿದೆ. ಈ ಬಗೆಗಿನ ಆಲೋಚನೆಯ ಹಿನ್ನೆಲೆಯಲ್ಲಿ ಜನಪದರ ವಿಜ್ಞಾನ–ತಂತ್ರಜ್ಞಾನದ ಸ್ವರೂಪವನ್ನು ಸ್ಥೂಲವಾಗಿ ಪರಿಚಯಿಸಿಕೊಳ್ಳಬಹುದು.

ಬೇಟೆ ವಿಜ್ಞಾನ

ಆದಿಮಾನವ ಮೊದಲ ವೃತ್ತಿಯೇ ಬೇಟೆ ಎನ್ನಬಹುದು. ಆ ಕಾಲಕ್ಕೆ ಬೇಟೆ ಎರಡು ಕಾರಣಗಳಿಂದ ಅನಿವಾರ್ಯವಾಗಿತ್ತು ಎನಿಸುತ್ತದೆ. ಒಂದು ಕಾಡಿನಲ್ಲಿ ಬದುಕುವ ಮನುಷ್ಯನಿಗೆ ಕಾಡು ಪ್ರಾಣಿಗಳಿಂದ ರಕ್ಷಣೆ. ಎರಡು: ತಿನ್ನಲು ಬೇಕಾದ ಆಹಾರ ಗಳಿಕೆಗಾಗಿ ಇದಕ್ಕಾಗಿ ಬೇಟೆ ವೃತ್ತಿಯನ್ನು ಆರಂಭಿಸಿದ ಆತನಿಗೆ ಯಾವುದೇ ಬೇಟೆ ಪರಿಕಗಳಾಗಲಿ ತಂತ್ರವಾಗಲಿ ಗೊತ್ತಿರಲಿಲ್ಲ. ಆದರೂ ಪ್ರಕೃತಿಯಲ್ಲಿ ಪ್ರಾಣಿಗಳು ಬೇಟೆಯಾಡುತ್ತಿದ್ದನ್ನು ಕಂಡು ತನ್ನ ಸೃಜನಶೀಲವಾದ ಆಲೋಚನೆಯ ಹಿನ್ನೆಲೆಯಲ್ಲಿ ನೂರಾರು ಬೇಟೆ ವಿಧಾನಗಳನ್ನು, ಆಯುಧಗಳನ್ನು ಪರಿಕರಗಳನ್ನು ಸೃಷ್ಟಿಸಿಕೊಂಡಿದ್ದಾನೆ. ಪ್ರಕೃತಿಯಿಂದ ದೊರೆಯುವ ಮರ–ನಾರುಗಳಿಂದಲೇ ಎಷ್ಟೋ ಆಯುಧಗಳನ್ನು ತಯಾರಿಸಿದ್ದಾನೆ. ಈ ಕ್ಷೇತ್ರದಲ್ಲಿ ಜನಪದ ಬೇಟೆಗಾರರು ಸಾಧಿಸಿದ ಸಾಧನೆದೊಡ್ಡದು. ಸಮಕಾಲೀನ ಕೆಲವಾರು ಇಕ್ಕಟ್ಟುಗಳಲ್ಲಿ ಪಾರಂಪರಿಕ ಬೇಟೆಗಾರರ ಅವಶ್ಯಕತೆ ಕಂಡುಬರುತ್ತಿರುವುದು ಇದಕ್ಕೆ ಪುಷ್ಟಿ ನೀಡುತ್ತದೆ. ಉದಾ: ತುಮಕೂರು ಜಿಲ್ಲೆಯ ಪಾವಗಡ ಗ್ರಾಮದಲ್ಲಿ ತೋಳಗಳ ಕಾಟ ಜಾಸ್ತಿಯಾದಾಗ ಅಂತಹ ತೋಳಗಳನ್ನು ಬೇಟೆಯಾಡಲು ಬುಡಕಟ್ಟು ಸಮುದಾಯಗಳ ತಜ್ಞ ಬಿಲ್ಲುಗಾರರನ್ನು ಕರೆಸುವ ಪ್ರಸ್ತಾಪವಾಗಿದ್ದನ್ನು ನೆನಪಿಸಿಕೊಳ್ಳಬಹುದು.

ಕೃಷಿ ವಿಜ್ಞಾನ

ಬೇಟೆಯ ಹಂತದ ನಂತರದ ಮನುಷ್ಯನ ಮಹತ್ವದ ಆವಿಷ್ಕಾರ ಕೃಷಿ, ಇರುವ ಕಾಡನ್ನು ಕಡಿದು ಭೂಮಿಯನ್ನು ಕೃಷಿಯೋಗ್ಯ ಮಾಡಲು ಅಗತ್ಯವಿರುವ ಹಲವಾರು ಉಪಕರಣಗಳನ್ನು ಸೃಷ್ಟಿಸಲಾಗಿದೆ. ಏಳುವ ಸಾಧನಗಳಾದ ನೇಗಿಲು, ಕೂರಿಗೆ, ಕುಂಟೆ, ಹಲುವೆಸೆಡ್ಡೆ, ಹೆಗ್ಗುಂಟೆ, ಎಡೆಕುಂಟೆ ಮುಂತಾದವು: ಕಳೆ ತೆಗೆಯುವ ಸಾಧನವಗಳಾದ ಕಳೆಕುಡ್ಲು ಕುರುಜಿಗೆ, ಕುಳ್ಮುಡು, ಕುಡ್ಲು, ಅಟ್ಟಣೆ, ಕಣಕ್ಕೆ ಬೇಕಾದ ಮೆಟಿಗೂಟ, ಮೆರಗೋಲು, ಜರಡಿ, ರೋಣಗಲ್ಲು, ನೀರೆತ್ತಲು ಏತ, ಕಪಿಲೆ ಇನ್ನಿತರ ಉಪಕರಣಗಳು; ಇವುಗಳಲ್ಲದೆ ಬೀಜಗಳ ಉತ್ಪಾದನೆ ಮತ್ತು ಸಂರಕ್ಷಣಾ ವಿಧಾನಗಳು; ಬಿತ್ತನೆ ಕೊಯ್ಲು ಮೊದಲಾದ ಕೆಲಸಗಳಿಗೆ ಕಾಲಮಾನವನ್ನು ಹೊಂದಿಸಿಕೊಂಡಿದ್ದು ಇವೇ ಮೊದಲಾದವು ಆದಿಮಾನವ ಮಹತ್ವದ

ಶೋಧಗಳಾಗಿವೆ. ಇಂಥ ಪರಂಪರೆಯನ್ನು ಅರ್ಥಪೂರ್ಣವಾಗಿ ಮುಂದುವರೆಸಬೇಕಿದ್ದು ನಾವು ಆಧುನಿಕ ಯಂತ್ರಜ್ಞಾನದ ದಾಸರಾಗಿ ಅನೇಕ ಸಮಸ್ಯೆಗಳನ್ನು ಮೈ ಮೇಲೆ ಹಾಕಿಕೊಂಡಿದ್ದೇವೆ. ಇದನ್ನು ಮನಗಂಡೇ ಇತ್ತೀಚಿನ ದಿನಗಳಲ್ಲಿ ಆಧುನಿಕ ಕೃಷಿಗೆ ಪರ್ಯಾಯವಾಗಿ ಪಾರಂಪರಿಕ ಕೃಷಿ ಪದ್ಧತಿಗಳ ಕಡೆಗೆ ಒಲವು ಹೆಚ್ಚಾಗಿದೆ.

ವಸತಿ ತಂತ್ರಜ್ಞಾನ

ಮಾನವ ತನ್ನ ಅಲೆಮಾರಿ ಜೀವನವನ್ನು ಕೊನೆಗೊಳಿಸಿ ಒಂದು ಕಡೆ ನೆಲೆನಿಂತ ಮೇಲೆ ತನ್ನ ವಾಸಕ್ಕೆ ಯೋಗ್ಯವೆನಿಸುವ ಮನೆಗಳನ್ನು ನಿರ್ಮಿಸಿಕೊಂಡ. ಇದಕ್ಕೂ ಮೊದಲು ಬಂಡೆಯ ಬುಡದಲ್ಲಿ, ಗುಹೆಗಳಲ್ಲಿ, ಮರದ ಪೊಟರುಗಳಲ್ಲಿ ಆಶ್ರಯ ಪಡೆದಿದ್ದ. ಮನುಷ್ಯ ಪ್ರಕೃತಿಯಲ್ಲೇ ದೊರಕುವ ವಿವಿಧ ಸಾಮಗ್ರಿಗಳನ್ನು ಬಳಸಿ ವಾಸಕ್ಕೆ ಯೋಗ್ಯವಾದ ಮನೆಗಳನ್ನು ನಿರ್ಮಿಸಿಕೊಂಡದ್ದು ಮಹತ್ವದ ಬದಲಾವಣೆ. ವಿಶೇಷವೆಂದರೆ ಪರಿಸರದಲ್ಲಿ ಪ್ರಾಣಿ–ಪಕ್ಷಿಗಳು ಕೂಡ ತಮಗೆ ಅನುಕೂಲವೆನಿಸುವ ವಾಸಸ್ಥಾನಗಳನ್ನು ನಿರ್ಮಿಸಿಕೊಂಡಿದ್ದನ್ನು ಕಾಣಬೇಕು. ಈ ಹಿನ್ನೆಲೆಯೊಳಗೆ ಮನುಷ್ಯನ ನೆರಕೆ–ಗುಡ್ಲು, ಇರುವೆಗೂಡು, ಜೇನುಗೂಡು ಗೀಜಗನ ಗೂಡು, ರೇಷ್ಮೆಗೂಡು, ಜೇಡರ ಬಲೆಗಳ ವಿಷಯಗಳನ್ನು ಗಮನಿಸಿದರೆ ಈ ವಸತಿ ತಂತ್ರಜ್ಞಾನ ಎಂಥ ಅದ್ಭುತ ಜ್ಞಾನ ಎಂಬುದು ಮನವರಿಕೆಯಾಗುತ್ತದೆ.

ವೈದ್ಯ ವಿಜ್ಞಾನ

ಮಾನವನ ಆರಂಭಿಕ ದಿನಗಳಲ್ಲಿ ಔಷಧಿ ಮತ್ತು ಆಹಾರ ಬೇರೆ ಬೇರೆ ಅಲ್ಲ. ಇವರ ಸಂಸ್ಕೃತಿಯೊಳಗೆ ಸಾಮಾನ್ಯ ಕಾಯಿಲೆಗಳಿಗೆಲ್ಲ ಪ್ರತ್ಯೇಕ ಮದ್ದು ಇಲ್ಲ. ಬದಲಿಗೆ ಆಹಾರದಲ್ಲಿಯೇ ಔಷಧೀಯ ಗುಣಗಳಿರುವ ಪದಾರ್ಥಗಳು ಸೇರುತ್ತಿದ್ದವು. ಇನ್ನೂ ಗಂಭೀರ ಕಾಯಿಲೆಗಳು ಬಂದಲ್ಲಿ ಪ್ರಕೃತಿಯಲ್ಲೆ ಸಿಗುವ ಬೇರು–ನಾರು, ಸೊಪ್ಪು, ಹೂವು–ಕಾಯಿಗಳೇ ಔಷಧಿಗಳು. ಈ ಸಂಬಂಧದ ನಾಟಿ ವೈದ್ಯ ಪದ್ಧತಿಗಳು ಇಂದಿಗೂ ಬಳಕೆಯಲ್ಲಿವೆ. ಅಲೋಪತಿ ವೈದ್ಯ ಪದ್ಧತಿಗೆ ಪರ್ಯಾಯವೆಂಬಂತೆ ಬಿಂಬಿಸಬೇಕಾಗಿರುವ ಅಯುರ್ವೇದಿಕ್ ಹಾಗೂ ನಾಟೀ ಔಷಧೀಯ ಕ್ರಮಗಳನ್ನು ಇಲ್ಲಿ ಗಮನಿಸಬೇಕು. ಯಾವುದೇ ಅಡ್ಡ ಪರಿಣಾಮಗಳಿಲ್ಲದ, ಕಡಿಮೆ ಖರ್ಚಿನಲ್ಲಿ ದೊರೆಯುವ ಈ ಪದ್ಧತಿಗಳ ಬೆಲೆಯನ್ನು ಕಳೆದು ತಾನು ಮಾತ್ರ ಸತ್ಯ ಎಂದು ಬಿಂಬಿಸಿದ ಇಂಗ್ಲಿಷ್ ವೈದ್ಯಪದ್ಧತಿಯ ಹುನ್ನಾರಗಳನ್ನು ನಾವು ಈಗಾಗಲೇ ಅರ್ಥಮಾಡಿಕೊಂಡಿದ್ದೇವೆ.

ಆಹಾರ ವಿಜ್ಞಾನ

ಜಾಗತಿಕ ವಿದ್ಯಾಮನಗಳ ಕಾರಣದಿಂದಾಗಿ ಏಕರೂಪ ಆಹಾರ ಪದ್ಧತಿ ಇಂದು ನಮ್ಮ ಸಮಾಜವನ್ನು ಹಿಡಿತದಲ್ಲಿಟ್ಟುಕೊಂಡಿದೆ. ಆದರೆ ಮನುಷ್ಯನ ಚರಿತ್ರೆಯ ಒಡಲಲ್ಲಿ ಪ್ರದೇಶ–ಹವಾಮಾನಕ್ಕೆ ಅನುಗುಣವಾಗಿ ಸ್ಥಳೀಯವಾಗಿ ದೊರೆಯುವ ಪರಿಕರಗಳನ್ನು ಬಳಸಿಕೊಂಡು ನೂರಾರು– ಸಾವಿರಾರು ರೀತಿಯಲ್ಲಿ ಅಡುಗೆಗಳ ಬಗೆಗಳನ್ನು ತಯಾರಿಸಿದ್ದಾರೆ. ರುಚಿ–ಸ್ವಾದ ಹಾಗೂ ಆರೋಗ್ಯದ ಹಿನ್ನೆಲೆಯಲ್ಲೇ ಎಲ್ಲಾ ಅಡುಗೆಗಳು ಸಿದ್ಧಗೊಂಡಿವೆ. ಈ ಮೊದಲೇ ಪ್ರಸ್ತಾಪಿಸಿದಂತೆ ಏಕ ರೂಪಿಯಾದ ಅಡುಗೆಗಳಲ್ಲಿ ಹಲವಾರು ದೋಷಗಳು ಇರುವುದನ್ನು ಎಲ್ಲರೂ ಗಮನಿಸಿದ್ದೇವೆ. ಹಾಗಾಗಿ ಆರೋಗ್ಯ ಮತ್ತು ರುಚಿಗಾಗಿ ಮತ್ತೆ ನಾವು ಹಿಂದಕ್ಕೆ ಹೊರಳಿ ನೋಡಬೇಕಿದೆ.

ಜನಪದ ತಂತ್ರಜ್ಞರು ಮತ್ತು ತಂತ್ರಜ್ಞಾನ

ನಾವು ತಿಳಿದಿರುವಂತೆ ತಂತ್ರಜ್ಞಾನ ಮತ್ತು ಅದನ್ನು ಸೃಷ್ಟಿಸಿದ ತಂತ್ರಜ್ಞರು 19ನೇ ಶತಮಾನದಲ್ಲಿ ದಿಢೀರನೆ ಉದ್ಭವಿಸಿದ್ದಲ್ಲ. ಆಧುನಿಕ ತಂತ್ರಜ್ಞಾನಕ್ಕೆ ಪರಂಪರೆಯ ಜ್ಞಾನ ಮೂಲ ಎಂಬುದನ್ನು ಧೈರ್ಯವಾಗಿ ಹೇಳಬಹುದು. ಏಕೆಂದರೆ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದ್ದು ಬಡಗಿಗಳು, ನೇಕಾರರು ಕುಂಬಾರರು, ಕಮ್ಮಾರರು, ಮೇದರು,

ಚೆನಿವಾರದವರು, ಲೋಹಶಿಲ್ಪಿಗಳು, ಬಣ್ಣಗಾರರು ಇವರೆಲ್ಲ ನಿಜವಾದ ತಂತ್ರಜ್ಞರು. ಇವರು ಸೃಷ್ಟಿಸಿದ ಜ್ಞಾನ ಅದ್ಭುತ ತಂತ್ರಜ್ಞಾನ ಹಾಗಾಗಿ ನಾವು ಈ ಜ್ಞಾನಗಳ ಬಗ್ಗೆಯೂ ಗಂಭೀರವಾದ ತಿಳುವಳಿಕೆಯನ್ನು ಪಡೆಯಬೇಕಿದೆ.

ಮೇಲಿನ ಎಲ್ಲಾ ಅಂಶಗಳನ್ನು ಗಂಭೀರವಾಗಿ ವಿಚಾರ ಮಾಡಿದರೆ ಸಿಗುವ ಫಲಿತಾಂಶವೆಂದರೆ ಆಧುನಿಕ ವಿಜ್ಞಾನ ತಂತ್ರಜ್ಞಾನಗಳು ಸರ್ವಸ್ವತಂತ್ರವೆಂಬಂತೆ ಬಿಂಬಿಸುತ್ತಿರುವುದು ಸರಿಯಾದ ಕ್ರಮವಲ್ಲ. ಇವುಗಳಿಗೆ ಮೂಲಾಧಾರಗಳಂತೆ ಇರುವ ಪಾರಂಪರಿಕ ಜ್ಞಾನಗಳು ಮತ್ತು ಜ್ಞಾನಿಗಳು ಮುಂದೆ ಬಂದ ಜ್ಞಾನಿಗಳಿಗೆ ಬೇರುಗಳು. ಹಾಗಾಗಿ ಮೂಲೆಗುಂಪಾಗುತ್ತಿರುವ, ಕೀಳರಿಮೆಗೆ ಒಳಗಾಗಿರುವ ಆದಿಮ ಜ್ಞಾನಗಳಿಗೂ ಸೂಕ್ತ ಗೌರವ ಹಾಗೂ ಮಾನ್ಯತೆಗಳನ್ನು ನೀಡಿ ಅವುಗಳಿಗೂ ಆಧುನಿಕ ಕಾಲದಲ್ಲಿ ಒಂದು ಸ್ಥಾನವನ್ನು ನೀಡುವ ಕೆಲಸ ಅಗತ್ಯವಾಗಿ ನಡೆಯಬೇಕಿದೆ.

ಸಾಹಿತ್ಯಾದಿ ಕಲೆಗಳು

ಸಾಹಿತ್ಯ ಮತ್ತು ಬಗೆ ಬಗೆಯ ಕಲೆಗಳು ಕನ್ನಡ ಜಾನಪದದಲ್ಲಿ ಸಂವೃದ್ಧವಾಗಿದ್ದು, ಸಮಾಜದಲ್ಲಿ ಅನೇಕ ರೀತಿಯ ಕ್ರಿಯಾತ್ಮಕ ಜವಾಬ್ದಾರಿಯನ್ನು ನಿರ್ವಹಿಸಿವೆ. ಬಿ.ಎಂ.ಶ್ರೀ ಅವರು ಹೇಳಿರುವಂತೆ 'ಜನವಾಣಿ ಬೇರು ಕವಿವಾಣಿ ಹೂವು' ಈ ಮಾತು ಬರೀ ಸಾಹಿತ್ಯಕ್ಕೆ ಮಾತ್ರ ಅನ್ವಯಿಸದೆ ಜನಪದದ ಸಾಹಿತ್ಯಾದಿ ಕಲೆಗಳಿಗೆ ಅನ್ವಯಿಸಬಹುದು. ಅಂದರೆ ಇಂದಿನ ಶಿಷ್ಟಸಾಹಿತ್ಯ ಮತ್ತು ಕಲೆಗಳು ರೂಪುಗೊಂಡ ಬಗೆ ಹಾಗೂ ಅವು ಸಮಾಜದ ಉನ್ನತಿಗಾಗಿ ಪಟ್ಟ ಶ್ರಮವನ್ನು ಅವುಗಳ ಸ್ವರೂಪದೊಂದಿಗೆ ವಿವರಿಸಿಕೊಳ್ಳುವುದು ಉಪಯುಕ್ತ. ಮೊದಲಿಗೆ ಸಾಹಿತ್ಯ ಸ್ವರೂಪ, ಪ್ರಕಾರ ಮತ್ತು ಕಾರ್ಯಗಳನ್ನು ತಿಳಿಯಬಹುದು.

ಯಾವುದೇ ಭಾಷೆಯ ಜಾನಪದದಲ್ಲಿ ಸಾಹಿತ್ಯ ಸಿಂಹಪಾಲು. ಕನ್ನಡದಲ್ಲಿಯಂತೂ ಶ್ರೀಮಂತವಾದ ಜನಪದ ಸಾಹಿತ್ಯ ಸಂಪತ್ತು ಇದೆ. 'ಜಗತ್ತಿನ ಜನಪದ ಸಾಹಿತ್ಯದ ಎಲ್ಲಾ ಪ್ರಕಾರಗಳಿಗೂ ಉದಾಹರಣೆ ನೀಡಬಹುದಾದ ಸಾಹಿತ್ಯ ಇರುವುದಷ್ಟೆ ಅಲ್ಲ. ಆ ಪ್ರಕಾರಗಳಿಗೆ ಹೊರತಾದವೂ ಹೊಸ ಪ್ರಕಾರಗಳಿಗೆ ಆಕರವಾಗುವಂತಹವೂ ಇವೆ. ಈ ಸಾಹಿತ್ಯ ಒಬ್ಬರ ಸೃಷ್ಟಿಯಲ್ಲ. ಹುಟ್ಟುವಾಗಲೇ ಬಹು ವಿಧದ ಅನುಭವಗಳ ಒಟ್ಟು ಮೊತ್ತವಾಗಿ ಸೃಷ್ಟಿಯಾಗುವ ಜನಪದ ಸಾಹಿತ್ಯ ಒಬ್ಬರ ಸೃಷ್ಟಿ ಅಲ್ಲವೇ ಅಲ್ಲ. ಮುಂದುವರೆಯುವುದು ಕೂಡ ಸಮಷ್ಟಿ ನೆಲೆಯಲ್ಲಿಯೇ ಆಗಿದೆ. ಅಂದರೆ ಜನಪದ ಸಾಹಿತ್ಯಕ್ಕೆ ಕರ್ತೃ ಇರುವುದಿಲ್ಲ ಅಪರೂಪಕ್ಕೆ ಇದ್ದರೂ ಮುಂದಿನ ಬೆಳವಣಿಗೆಗಳಲ್ಲಿ ಆತ/ಆಕೆ ಕಾಣದಂತೆ ಮಾಯವಾಗುತ್ತಾರೆ. ಹಾಗೆಯೇ ತೋಂಡಿ ಸಂಪ್ರದಾಯದ ಮೂಲಕ ಮುಂದಿನ ತಲೆಮಾರುಗಳಿಗೆ ಪ್ರಸರಣಗೊಳ್ಳುತ್ತದೆ. ಪ್ರಾಣಿಗಳಿಗೂ ಮನುಷ್ಯರಿಗೂ ವ್ಯತ್ಯಾಸವಿಲ್ಲ. ಸಂಸ್ಕೃತಿಯ ಸಮೃದ್ಧ ಅಂಗ ಸಾಹಿತ್ಯ. ಈ ಸಾಹಿತ್ಯ ಜನಪದದ ಬದುಕಿನ ಅವಿಭಾಜ್ಯ ಅಂಗವಾದುದರಲ್ಲಿ ಸಂಶಯವಿಲ್ಲ. ಮನುಷ್ಯನ ಅಂತರಂಗದ ಅಭಿವ್ಯಕ್ತಿಯ ಸಾಕಾರ ರೂಪ ಸಾಹಿತ್ಯ. ಇದು ಕಾಯಕದೊಡನೆ ಸೃಷ್ಟಿಯಾಗಿದೆ. ಹಾಗಾಗಿ ಜನಪದರಲ್ಲಿ ಬದುಕು ಮತ್ತು ಸಾಹಿತ್ಯ ಇವೆರೆಡು ಬೇರೆ ಬೇರೆ ಅಲ್ಲ. ಈ ಸಾಹಿತ್ಯ ಬಲವಂತವಾಗಿ ತಿಣಿಕಿ ಕಟ್ಟಿದ್ದಲ್ಲ; ಪರಿಸರದ ಪ್ರಭಾವದಿಂದ ಸಹಜವಾಗಿ ಹುಟ್ಟಿದ್ದು. ಜನಪದ ಸಾಹಿತ್ಯದ ವಸ್ತು, ರೂಪ, ಅಭಿವ್ಯಕ್ತಿಗಳು ವೈವಿಧ್ಯಮಯವಾಗಿವೆ. ಅಧಿಕವಾದ ತಾಜಾತನದಿಂದ ಕೂಡಿವೆ. ಇಂಥ ವಿಶಿಷ್ಟವಾಗಿರುವ ಕನ್ನಡ ಜನಪದ ಸಾಹಿತ್ಯವನ್ನು ಮೂರು ಮುಖ್ಯ ವಿಭಾಗಗಳಲ್ಲಿ ವಿಂಗಡಿಸಿ ನೋಡಬಹುದು ಅವುಗಳೆಂದರೆ ಅ) ಜನಪದ ಪದ್ಯ ಸಾಹಿತ್ಯ ಆ) ಜನಪದ ಗದ್ಯ ಸಾಹಿತ್ಯ ಇ) ಜನಪದ ನಾಟಕ ಸಾಹಿತ್ಯ.

ಜನಪದ ಪದ್ಯ ಸಾಹಿತ್ಯ ತನ್ನ ಸ್ವರೂಪ ಹಾಗೂ ಸಾಧ್ಯತೆಗಳ ಹಿನ್ನೆಲೆಯೊಳಗೆ ಅತ್ಯಂತ ಗಮನಾರ್ಹವಾದುದು. ಕೇವಲ ಮನೋರಂಜನೆಯನ್ನು ಮಾತ್ರ ನೀಡದೆ ಅದರಾಚೆಗಿನ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜವಾಬ್ದಾರಿಯನ್ನು ನಿರ್ವಹಿಸಿದೆ. ಪದ್ಯ ಸಾಹಿತ್ಯ ಕಾಣಿಸಿಕೊಳ್ಳುವ ವಿವಿಧ ಬಗೆಗಳನ್ನು ಗಮನಿಸಿ ಸ್ತ್ರೀಯರ ಹಾಡುಗಳು, ಗಂಡಸರ ಹಾಡುಗಳು;

ನಾಟಿಯ ಪದಗಳು, ಮದುವೆಯ ಪದಗಳು, ಲಾವಣಿಗಳು, ಕಥಾನಗೀತೆಗಳು, ಮಹಾಕಾವ್ಯಗಳು, ತ್ರಿಪ್ರದಿಗಳು ಇತ್ಯಾದಿ ಇನ್ನೂ ಹತ್ತಾರು ರೀತಿಯ ಪದಗಳಿವೆ. ಈ ಸಮೃದ್ಧ ಕಾವ್ಯ ಪ್ರಕಾರಗಳಲ್ಲಿ ಜನಪದದ ಆಲೋಚನೆಯ ದರ್ಶನಗಳಿಂದ ಒಟ್ಟಾರೆ ಈ ಸಾಹಿತ್ಯದಲ್ಲಿ ಹೆಣ್ಣಿನ ಸಮಸ್ಯೆ-ಸವಾಲು-ಸಾಧ್ಯತೆಗಳನ್ನು ತೆರೆದಿಡುವ ತ್ರಿಪದಿ ಸಾಹಿತ್ಯ ಹಾಗೂ ಖಂಡ ಕಾವ್ಯಗಳು, ಮಹಾಕಾವ್ಯಗಳು; ಚರಿತ್ರೆ ಪುರಾಣಗಳನ್ನು ನಮ್ಮ ಮುಂದೆ ಬಿಚ್ಚಿಡುವ ಲಾವಣಿಗಳು; ಸಾಂಸ್ಕೃತಿಕ ನಾಯಕ/ನಾಯಕಿಯರು ಸಮುದಾಯಗಳ ಉದ್ದಾರಕ್ಕೆ ದುಡಿದ ಪರಿ ಆ ಮೂಲಕ ಅವರು ಸಾಧಿಸಿದ ಸಾಧನೆಗಳನ್ನು ಹೇಳುವ ಮಹಾಕಾವ್ಯಗಳು; ದೇವರುಗಳನ್ನು ಕೊಂಡಾಡುವ ದೇವರ ಪದಗಳು ಗಮನಾರ್ಹವಾದವುಗಳಾಗಿವೆ. ಇಷ್ಟೊಂದು ಸಮೃದ್ಧ ಸಾಹಿತ್ಯ ಪರಂಪರೆ ಇದ್ದಾಗ್ಯೂ ಕೇವಲ ಕೆಲವೇ ಪ್ರಕಾರಗಳಿಗೆ ಜೊತುಬಿದ್ದ ಶಿಷ್ಟ ಸಾಹಿತ್ಯ ಪ್ರಚಾರಕ್ಕೆ ಬಂದಿತೇ ಹೊರತು ಜನಪದ ಸಾಹಿತ್ಯ ಬರಲಿಲ್ಲ. ಬದುಕಿನ ಕ್ರಿಯಾತ್ಮಕ ಪ್ರಕಾರವಾದ ಸಾಹಿತ್ಯ ಇಂದು ಅನೇಕ ಬಾರಿ ವೈಯುಕ್ತಿಕ ಲಾಭ ತರುವ ಕೆಲಸಮಾತ್ರ ಎಂಬಂತಾಗಿದ್ದು ದುರಂತ. ಹಾಗಾಗಿ ಇಂಥ ಪ್ರಕಾರಗಳಲ್ಲಿ ಬರೆಯಬೇಕಾದ ಕೆಲಸ ತುರ್ತಾಗಿ ಜರುಗಬೇಕಿದೆ.

ಇನ್ನೂ ಜನಪದ ಗದ್ಯ ಸಾಹಿತ್ಯವೂ ಕೂಡ ಅತ್ಯಂತ ವಿಶಿಷ್ಟ ಹಾಗೂ ಶಕ್ತಿಶಾಲಿ ವಿಭಾಗ. ಈ ವಿಭಾಗ ಜನಪದ ಕಥೆ, ಗಾದೆ, ಪುರಾಣ ಹಾಗೂ ಐತಿಹ್ಯ ಇವೇ ಮೊದಲಾದ ಪ್ರಕಾರಗಳನ್ನು ಗುರುತಿಸಬಹುದು. ಇಡೀ ಜನಪದ ಸಾಹಿತ್ಯದಲ್ಲಿ ಜನಪದ ಕಥೆಗೆ ವಿಶೇಷ ಮಾನ್ಯತೆ. ಈ ಮೊದಲೇ ವಿವರಿಸಿದ ಜನಪದ ಪದ್ಯ ಸಾಹಿತ್ಯ ವಿಭಾಗದ ವಿವಿಧ ಪ್ರಕಾರಗಳು ಜನಪದದ ಕೆಲಸದ ಜೊತೆ ಸಂಪರ್ಕ ಹೊಂದಿದ್ದವು. ಕೆಲಸದ ನಡುವೆಯೇ ಹುಟ್ಟಿ ಪ್ರದರ್ಶನಗೊಳ್ಳುತ್ತವೆ. ಆದರೆ ಈ ಜನಪದ ಕಥೆಗಳು ದುಡಿಮೆಯ ಜೊತೆ ಜೊತೆಗೆ ಇರುವಂತಹವುಗಳಲ್ಲ. ಬದಲಿಗೆ ನಿತ್ಯದ ದುಡಿಮೆಯ ಶ್ರಮವನ್ನು ಮರೆಯಲು, ಬಿಡುವಿನ ವೇಳೆಯನ್ನು ನಿರಾಳವಾಗಿ ಕಳೆಯಲು, ಏಕತಾನದ ಬದುಕಿಗೆ ರಂಜನೆಯನ್ನು ದೊರಕಿಸಿಕೊಳ್ಳಲು ಹೀಗೆ ನಾನಾ ಉದ್ದೇಶಗಳ ಹಿನ್ನೆಲೆಯಲ್ಲಿ ಜನಪದ ಕಥೆಗಳು ಹುಟ್ಟಿಕೊಂಡಿವೆ ಎನ್ನಬಹುದು. ಈ ಕಥೆಗಳ ಸಂವಾಹಕರಾಗಿ ಅಜ್ಜಿಯರು ಪ್ರಧಾನ ಪಾತ್ರವಹಿಸಿದ್ದಾರೆ. ಹೇಳಲ್ಪಡುವ ಕೇಳಲ್ಪಡುವ ಕಥೆಗಳು ಹೇಳುವವರ ಮತ್ತು ಕೇಳುವವರ ಆಶಯಗಳನ್ನು ಹೊಂದಿವೆ. ಅನೇಕರು ತಿಳಿದಿರುವಂತೆ ಜನಪದ ಕಥೆಗಳು ಕೇವಲ ಮನರಂಜನೆ ಹಾಗೂ ನೀತಿ ಭೋಧನೆಗೆ ಮಾತ್ರ ಸೀಮಿತವಲ್ಲ. ಮುಖ್ಯವಾಗಿ ಗಮನಿಸಬೇಕಾದುದೆಂದರೆ ಅವುಗಳಲ್ಲಿ ಕಟ್ಟಿದವರ ಕನಸ್ಸುಗಳಿವೆ. ಮನಸ್ಸುಗಳಿವೆ. ಹಾಗೆಯೇ ಅವು ಪ್ರಚಲಿತವಿರುವ ಪ್ರದೇಶದ ಸಂಸ್ಕೃತಿಯ ದರ್ಶಕಗಳೂ ಆಗಿರುತ್ತವೆ. ಜಾನಪದ ವಿದ್ವಾಂಸ ಅಂಬಳಿಕೆ ಹಿರಿಯಣ್ಣ ಹೇಳುವಂತೆ ಈ ಕಥೆಗಳಲ್ಲಿ "ಕಥಾನಾಯಕ ಒಳ್ಳೆಯವನೂ ಪ್ರತಿನಾಯಕ ದುಷ್ಟನೂ ಆಗಿರುತ್ತಾನೆ. ಕಥಾರಂಭದಲ್ಲಿ ದೃಷ್ಟರಾಗಿ ಕಾಣಿಸಿಕೊಂಡವರು ಅಂತ್ಯದಲ್ಲಿ ಉತ್ತಮರಾಗುತ್ತಾರೆ. ಕಿರಿಯರು, ದುರ್ಬಲರು ನಿರ್ಲಕ್ಷಕ್ಕೆ ಗುರಿಯಾದವರು ಜಯಗಳಿಸುತ್ತಾರೆ. ಜನಪದ ಕಥೆಗಳಲ್ಲಿ ಸಾಮಾನ್ಯವಾಗಿ ಚಿಕ್ಕವರು-ದೊಡ್ಡವರು, ಮನುಷ್ಯ-ರಾಕ್ಷಸರು, ಒಳ್ಳೆಯದು-ಕೆಟ್ಟದ್ದು, ನಾಯಕ-ಪ್ರತಿನಾಯಕ ಮುಂತಾದ ವೈದೃಶ್ಯಗಳಲ್ಲಿ ವ್ಯಕ್ತವಾಗುತ್ತದೆ. ಸ್ವರ್ಗ, ಮರ್ತ್ಯ, ನರಕ ಈ ಮೂರು ಲೋಕಗಳು ಕಥೆಗಳಲ್ಲಿ ಬರುತ್ತವೆ. ಮನುಷ್ಯರ ಜೊತೆಗೆ ದೇವತೆ, ರಾಕ್ಷಸ ದೆವ್ವ, ಬೇತಾಳ ಪ್ರಾಣಿಗಳೂ ಪಾತ್ರಗಳಾಗಿ ಕಾಣಿಸಿಕೊಳ್ಳುತ್ತವೆ. ಅದೃಷ್ಟದ ಏರು-ಪೇರು ಘಟನೆಗಳ ಮೇಲೆ ಪ್ರಭಾವ ಬೀರುತ್ತದೆ. ಮಂತ್ರದಂಡ, ಮಾಯದ ಚಾಪೆ, ಮಂತ್ರದ ಟೋಪಿ, ಉಂಗುರ, ಕಪ್ಪು ಕನ್ನಡಿ ಇವುಗಳ ಜೊತೆಗೆ ಮಂತ್ರವಾದಿಯ ಕೈವಾಡವೂ ಇರುತ್ತದೆ. ಜನಪದ ಕಥೆಯ ಸ್ವರೂಪ ಹಾಗೂ ಲಕ್ಷಣಗಳನ್ನು ಕುರಿತ ಈ ಮಾತುಗಳು ಜನಪದ ಕಥೆಯ ಆಶಯಗಳನ್ನು ಹಾಗೂ ಅವುಗಳ ಕ್ರಿಯಾತ್ಮಕತೆಯನ್ನು ಅತ್ಯಂತ ಸಮರ್ಥವಾಗಿ ವಿವರಿಸುತ್ತವೆ.

ಮೇಲಿನ ವಿವರಣೆಯಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿ ಎಂದರೆ ಪ್ರತಿನಾಯಕ ಕಥೆಯ ಕೊನೆಯವರೆಗೂ ಪ್ರತಿನಾಯಕನ ಸ್ಥಾನದಲ್ಲೇ ಮುಂದುವರೆಯದೆ ನಾಯಕನ ಸಮಾನ ಗೌರವಕ್ಕೆ ಬರುವುದು ಮತ್ತು ದುರ್ಬಲರಿಗೆ, ನಿರ್ಲಕ್ಷಕ್ಕೆ ಒಳಗಾದವರಿಗೆ ಜಯ ಲಭಿಸುವುದು. ಈ ಅಂಶಗಳನ್ನು ಪ್ರಸ್ತುತ ಜನಪದ ಕಥೆಗಳನ್ನು ಕಟ್ಟಿ ಹೇಳುತ್ತಿರುವ ಜನಪದರ ವೈಯಕ್ತಿಕ ಹಾಗೂ ಸಾಮಾಜಿಕ ಹಿನ್ನೆಲೆಗಳನ್ನು ಗಮನಿಸಿದರೆ ಬೆರಗುಹುಟ್ಟಿಸುವಂತಹ ಸತ್ಯಾಂಶಗಳು ಮನವರಿಕೆಯಾಗುತ್ತವೆ. ಇದಿಷ್ಟೆ ಅಲ್ಲ ಜನಪದ ಕಥೆಗಳಲ್ಲಿ ಪ್ರಕೃತಿಯಲ್ಲಿ ಯಾವುದು ಅಮುಖ್ಯವಲ್ಲ ಎಂಬುದನ್ನು ಸಾರಿಹೇಳುವ ನೂರಾರು ಆಶಯಗಳು ದೊರೆಯುತ್ತವೆ. ಅಂಥವುಗಳಲ್ಲಿ ಒಂದನ್ನು ನಿದರ್ಶನಕ್ಕಾಗಿ ಇಲ್ಲಿ ಪ್ರಸ್ತಾಪಿಸಬಹುದು. ಜನಪದ ಕಥೆಗಳಲ್ಲಿ ಮನುಷ್ಯರ ಜೊತೆಗೆ ಚಿಕ್ಕ ಚಿಕ್ಕ ಜಂತುಗಳು, ಪಕ್ಷಿಗಳು ಭಾಗಿದಾರರಾಗಿರುತ್ತಾರೆ. ಅಂಥ ಸಂದರ್ಭಗಳಲ್ಲಿ ಮನುಷ್ಯರಿಗೆ ಅಸಾಧ್ಯವಾದ ಕೆಲಸವನ್ನು ಇರುವೆಯಂತಹ ಜಂತುವಿನ ಸಹಾಯದಿಂದಲೋ  ಪಕ್ಷಿಯ ಸಹಾಯದಿಂದಲೋ ಮಾಡಿಸಿಬಿಡುವ ಕಾರ್ಯಗಳು ನಡೆಯುತ್ತವೆ. ಮನುಷ್ಯರೂಪದ ನಾಯಕನಿಗೆ ಆನೆಯಂಥ ಬೃಹತ್ ಪ್ರಾಣಿಯಿಂದ ಬಿಡಿಸಲಾಗದ ಸಮಸ್ಯೆಯನ್ನು ಇರುವೆ, ಸಣ್ಣ ಪಕ್ಷಿ ನೆರವೇರಿಸಿಕೊಡುತ್ತವೆ ಎಂಬುದು ಪವಾಡ ಸದೃಶ್ಯ. ಘಟನೆಯಲ್ಲಿ ನಾಯಕ ಪರೀಕ್ಷೆಯನ್ನು ಗೆದ್ದು ರಾಜಕುಮಾರಿಯನ್ನು ಪಡೆದು ಬರಬೇಕು ಆಗ ರಾಜಕುಮಾರಿ ಕಡೆಯವರು ನಾಯಕನಿಗೆ ಕೆಲವು ಪರೀಕ್ಷೆಗಳನ್ನು ಒಡುತ್ತಾರೆ. ಅಂಥವುಗಳಲ್ಲಿ ಹತ್ತು ಕಡಾಯ ಅನ್ನವನ್ನು ಒಂದು ರಾತ್ರಿಲೇ ತಿಂದು ಮುಗಿಸಬೇಕು ಎಂಬುದಾಗಿದ್ದರೆ ಆಗ ಆನೆ ಬೇಕು, ಆದರೆ ಒಂದು ಚೀಲ ರಾಗಿಯನ್ನು ತಂದು ಹೊಲದಲ್ಲಿ ಚೆಲ್ಲಿ ಅವುಗಳನ್ನು ದಿನ ಬೆಳಗಾಗುವುದರೊಳಗೆ ಆಯ್ದುಕೊಡಬೇಕು ಎಂದಾಗ ಇರುವೆಯ ಸಹಾಯ ಬೇಕಾಗುತ್ತದೆ. ಹೀಗೆ ಪ್ರಕೃತಿಯಲ್ಲಿ ಎಲ್ಲರಿಗೂ ಶಕ್ತಿಯಿದೆ. ಅವರವರ ಕೆಲಸಕಾರ್ಯಗಳಿವೆ. ಆದ್ದರಿಂದ ಯಾರನ್ನೂ ಗೌಣಗೊಳಿಸುವುದು ಸರಿಯಾದ ಕ್ರಮವಲ್ಲ ಎಂಬುದಾಗಿ ಜನಪದ ಕಥೆಗಳು ಅನೇಕ ಆಶಯಗಳು ಸಾರುತ್ತವೆ.

ಇನ್ನೂ ಜನಪದ ಗದ್ಯ ಭಾಗದಲ್ಲಿ ಬರುವ ಗಾದೆ – ಒಗಟುಗಳನ್ನು ಗಮನಿಸುವುದಾದರೆ ಆದಿಮಾನವನ ಬದುಕಿನ ಅನುಭವ ಶಿಖರಗಳಿವು. ಮನುಷ್ಯ ಜಾತಿಗೆ ವಿವೇಕ ಹೇಳಲೆಂದೇ ಹುಟ್ಟಿದಂತಿರುವ ಇವು ಎಷ್ಟು ಪ್ರಭಾವಶಾಲಿ ಎಂದರೆ, ಜನಪದವನ್ನು ವಿರೋಧಿಸುವವರು ಅದೇ ಜನಪದ ಗಾದೆ ಮೂಲಕ ವಿರೋಧಿಸುವ ಪರಿಸ್ಥಿತಿಯನ್ನು ಕಾಣುತ್ತೇವೆ. ಇಂದಿಗೂ ಎಷ್ಟೊಂದು ಜನ ಆಧುನಿಕ ಬರಹಗಾರರು ಅಪಾರ ಪ್ರಮಾಣದ ಗಾದೆ – ಒಗಟುಗಳನ್ನು ತಮ್ಮ ಬರಹಗಳಲ್ಲಿ ಅಳವಡಿಸಿ ಬರೆದಿದ್ದಾರೆ. ಅಷ್ಟೇ ಅಲ್ಲ ನಾಗರೀಕತೆಯ ತುತ್ತ ತುದಿಯಲ್ಲಿ ಇರುವ (?) ಜನ ತಮ್ಮ ಮಾತುಗಳ ಪರಿಣಾಮಕಾರಿ ಸಂವಹನಕ್ಕೆ ಎಷ್ಟೊಂದು ಗಾದೆ ಮಾತುಗಳನ್ನು ಬಳಸುತ್ತಾರೆ. ಈ ಎಲ್ಲಾ ಪ್ರಸಂಗಗಳನ್ನು ಗಮನಿಸಿದರೆ ಜನಪದರು ತಮ್ಮ ಲೋಕಾನುಭವಗಳನ್ನು ಎಂಥ ಪ್ರಕಾರದಲ್ಲಿ ಹಿಡಿದಿಟ್ಟಿದ್ದಾರೆ ಎಂಬುದರ ಅರಿವು ಮೂಡುತ್ತದೆ.

ಜನಪದ ನಾಟಕ ಸಾಹಿತ್ಯವೂ ಕೂಡ ಆದಿಮಾನವನ ಆಲೋಚನೆಗಳ ಪರಿಣಾಮಕಾರಿ ಅಭಿವ್ಯಕ್ತಿಯಾಗಿದೆ. ಜನಪದ ರಂಗಭೂಮಿಯನ್ನು ಈ ಹಿನ್ನೆಲೆಯಲ್ಲಿ ಗಮನಿಸಿದಾಗ "ಕನ್ನಡ ಜನಪದ ರಂಗಭೂಮಿ ಇಂದಿಗೂ ಜೀವಂತವಾಗಿ ಅನೇಕ ರೀತಿಯ ಸಾಹಿತ್ಯ ಸೃಷ್ಟಿಯಾಗಲು ಕಾರಣವಾಗಿದೆ. ಅನೇಕ ಆಧುನಿಕ ನಾಟಕಗಳು ಮತ್ತು ನಾಟಕಕಾರರು ಜನಪದ ರಂಗಭೂಮಿಗೆ ಋಣಿಯಾಗಿದ್ದಾರೆ. ಜನಪದ ರಂಗಭೂಮಿಯ ಚಟುವಟಿಕೆಗಳಲ್ಲಿ ಸ್ತ್ರೀಯರ ಹಾಗೂ ಪುರುಷರ ಇಬ್ಬರ ಸಹಾಯ ಸಹಕಾರವೂ ಅಗತ್ಯವಾಗಿರುತ್ತದೆ". ಜನಪದ ರಂಗಭೂಮಿಯು ಸರಳ ಹಾಗೂ ಸ್ಥಳೀಯ ಮುಖಗಳನ್ನು ಹೊಂದಿದ್ದು, ಇತಿಹಾಸ–ಪುರಾಣಗಳಿಂದ ವಸ್ತುವನ್ನು ಆಯ್ದುಕೊಂಡು ತಮ್ಮ ಸಂಸ್ಕೃತಿಗೆ ಅನುಗುಣವಾಗಿ ಮರು ರೂಪಧಾರಣೆ ಮಾಡಿದ ಸಂದರ್ಭಗಳು ಸಾಮಾನ್ಯ. ಇಲ್ಲಿ ಪಾತ್ರದಾರಿಗಳಿಗೂ ಸಾಕಷ್ಟು ಸ್ವಾತಂತ್ರ್ಯವಿದ್ದು ಪ್ರೇಕ್ಷಕರನ್ನು

ಜಾಗೃತಗೊಳಿಸುವ ಪ್ರಯತ್ನವೂ ನಡೆಯುತ್ತದೆ. ಈ ರಂಗಭೂಮಿ ಯಕ್ಷಗಾನ, ಬಯಲಾಟ, ಸಣ್ಣಾಟ, ದೊಡ್ಡಾಟ, ಗೊಂಬೆಯಾಟ ಮೊದಲಾದ ಶಾಖೆಗಳನ್ನು ಹೊಂದಿದ್ದು ಹಲವಾರು ವೈಶಿಷ್ಟ್ಯತೆಗಳೊಂದಿಗೆ ಪ್ರಚಲಿತದಲ್ಲಿವೆ.

**ಪ್ರದರ್ಶನ ಕಲೆಗಳು**

ಕನ್ನಡ ಜನಪದ ಬದುಕಿನೊಳಗೆ ಪ್ರದರ್ಶನ ಕಲೆಗಳ ಪಾತ್ರ ಹಾಗೂ ಗಾತ್ರಗಳೆರಡೂ ತುಂಬಾ ವಿಸ್ತಾರವಾದುದು. ಈ ಪ್ರದರ್ಶನ ಕಲೆಗಳ ಸಂಖ್ಯೆ ನೂರಾರು. ಮೇಲು ನೋಟಕ್ಕೆ ಈ ಕಲೆಗಳು ಮನುಷ್ಯನ ಮನೋರಂಜನೆಯ ಉದ್ದೇಶದವು ಎನಿಸಿದರೂ ಆಳದಲ್ಲಿ ಕೇವಲ ಮನೋರಂಜನೆಯಲ್ಲ. ಅದರಾಚೆಗಿನ ಒಂದು ಸಾಮಾಜಿಕ ಜವಾಬ್ದಾರಿ ಇದೆ ಎನಿಸುತ್ತದೆ. ಗಮನಿಸಬೇಕಾದುದು ಏನೆಂದರೆ ಪ್ರದರ್ಶನ ಕಲೆಗಳೆಲ್ಲವು ಯಾವುದಾದರೂ ಒಂದಿಲ್ಲೊಂದು ಧರ್ಮದ ಛಾಯೆಯನ್ನು ಪಡೆದಿವೆ. ಹಾಗೆಯೇ ಒಂದು ಕಲೆಯನ್ನು ಪ್ರದರ್ಶಿಸುವ ಸಮುದಾಯದ ಪ್ರಾಪಂಚಿಕ ಜ್ಞಾನವನ್ನು ಪ್ರಕಟಪಡಿಸುತ್ತವೆ. ಉದಾ: ಪೂಜಾ ಕುಣಿತ, ಸೋಮನ ಕುಣಿತ, ಭೂತಾರಾಧನೆ, ನಾಗಮಂಡಲ, ವೀರಗಾಸೆ, ಜೋಗತಿ ಕುಣಿತ, ಕಂಸಾಳೆ, ಗೊರವರ ಕುಣಿತ, ಡೊಳ್ಳು ಕುಣಿತ, ಕರಪಾಲ ಮೇಳ ಇವೇ ಮೊದಲಾದ ಕಲೆಗಳು ತಮ್ಮ ತಮ್ಮ ದೈವಗಳ ಆರಾಧನೆಯ ಹಿನ್ನೆಲೆಯಲ್ಲಿ ರೂಪುಗೊಂಡಿದ್ದರೆ ಕರಗ ಕುಣಿತ, ಅಂಟಿಗೆ–ಪಂಟಿಗೆ, ಪಂಜಿನ ಕುಣಿತ, ಲಂಬಾಣಿ ಕುಣಿತ, ಕೋಲಾಟ ಇನ್ನೂ ಮೊದಲಾದವು ಸಮುದಾಯಗಳ ಲೋಕದೃಷ್ಟಿಯನ್ನು ಪ್ರಕಟಿಸುತ್ತವೆ.

ಹೀಗೆ ಜನಪದರ ಪ್ರದರ್ಶನ ಕಲೆಗಳು ತಮ್ಮದೇ ಆದ ಕಾರ್ಯ ನಿಮಿತ್ತ ಪ್ರದರ್ಶನಗೊಳ್ಳುತ್ತವೆ. ಮುಖ್ಯವಾಗಿ ಸಮಾಜದ ಜನರಿಗೆ ಸಮಾಜ ಸ್ವಾಸ್ಥ್ಯಕ್ಕೆ ಬೇಕಾಗುವ ನೀತಿ–ನಿಯಮಗಳನ್ನು ತಿಳಿಸುತ್ತಾ ಅವುಗಳನ್ನೂ ಮುಂದಿನ ತಲೆಮಾರಿಗೆ ಕೊಂಡೊಯ್ಯುವ ಪ್ರಯತ್ನವೂ ಇಲ್ಲಿ ನಡೆಯುತ್ತದೆ. ಆದರೆ ಇತ್ತೀಚೆಗೆ ಈ ಜನಪದ ಪ್ರದರ್ಶನ ಕಲೆಗಳನ್ನು ಕೇವಲ ಮನೋರಂಜನೆಯ ಸಾಧನಗಳಾಗಿ ನೋಡಲಾಗುತ್ತಿದೆ. ಅನೇಕ ಸಂದರ್ಭಗಳಲ್ಲಿ ಪ್ರದರ್ಶನ ಕಲೆಗಳ ಹಿನ್ನೆಲೆಗೆ ಇದ್ದ ಧಾರ್ಮಿಕ ನಂಟನ್ನೇ ಕಳಚಲಾಗಿದೆ. ದುರಂತವೆಂದರೆ ಧಾರ್ಮಿಕ ಚೌಕಟ್ಟಿನೊಳಗೆ ಗೌರವದಿಂದ ಪ್ರದರ್ಶನವಾಗುತ್ತಿದ್ದ ಕಲೆಗಳು ರಾಜಕಾರಣಿಗಳನ್ನು ಮತ್ಯಾರೋ ದೊಡ್ಡವರೆನಿಸಿಕೊಂಡವರನ್ನು ಮೆರವಣಿಗೆ ಮಾಡಲು ಗಾನ ಬಜಾನಗಳಂತೆ ಬಳಸಲಾಗುತ್ತಿದೆ. ಅಂದರೆ ಈ ಕಲೆಗಳ ಮೂಲ ಉದ್ದೇಶವೆ ಬುಡಮೇಲು ಆದಂತಾಯಿತು. ಕಲೆಗಳೆಲ್ಲವೂ ಮನೋರಂಜನೆಯ ಏಕೈಕ ಉದ್ದೇಶದಿಂದ ಬಳಕೆಯಲ್ಲಿವೆ ಎಂಬ ತಪ್ಪು ತಿಳುವಳಿಕೆ ಇಲ್ಲಿ ಕೆಲಸ ಮಾಡಿದೆ. ಇನ್ನೂ ಕೆಲವು ಪ್ರದರ್ಶನ ಕಲೆಗಳನ್ನು ಸರ್ಕಾರಿ ಸಂದೇಶಗಳನ್ನು ತಲುಪಿಸುವ ವಾಹಕಗಳಾಗಿ ಬಳಸಿದ ಸಂದರ್ಭಗಳೂ ಇದ್ದು ಇದನ್ನು ಜಾನಪದ ಆನ್ವಯತೆ ಎಂದು ಭಾವಿಸಲಾಗಿದೆ. ಇದು ಸರಿ ಆದರೂ ಬಳಸಿಕೊಳ್ಳುವಾಗ ಕಲೆಯ ಯಾವ ಆಯಾಮವನ್ನು ಬಳಸುತ್ತಿದ್ದೇವೆ ಎಂಬ ಎಚ್ಚರ ಇರಬೇಕಾಗುತ್ತದೆ.

**ಸಂಗೀತ**

ಜಾನಪದ ಪರಂಪರೆಗಳಲ್ಲಿ ಸಾಹಿತ್ಯ ಮತ್ತು ಸಂಗೀತ ಬೇರೆ ಬೇರೆ ಅಲ್ಲ. ಹಾಗಾಗಿ ಸಾಹಿತ್ಯದ ಸ್ವರೂಪ ಹಾಗೂ ವ್ಯಾಪ್ತಿ ಎಷ್ಟು ಹಿರಿದೋ ಸಂಗೀತವೂ ಕೂಡ ಅಷ್ಟೇ ಹಿರಿದು. ಇಂಥ ಪ್ರಾಚೀನ ಪರಂಪರೆಯಿರುವ ಸಂಗೀತಕ್ಕೆ ಶಿಷ್ಟ ಶಾಖೆಯಲ್ಲಿರುವಂತೆ ನಿರ್ದಿಷ್ಟ ಶಾಸ್ತ್ರವಿಲ್ಲ. ಆದರೆ ದನಿ ಮತ್ತು ದಾಟಿಗಳ ಪ್ರಾಥಮಿಕ ಅರಿವು ಇದೆ. ಜನಪದ ಸಂಗೀತ ಆರಂಭದಲ್ಲಿ ನಿರ್ದಿಷ್ಟ ನಿಯಮಗಳು ಇದ್ದರೂ ತಲೆಮಾರುಗಳಿಗೆ ಪ್ರಸರಣಗೊಂಡಂತೆಲ್ಲ ಅವು ಸಡಿಲಗೊಂಡಿರಬಹುದು. ಅದು ಏನೇ ಆದರೂ ಯಾವುದೇ ಶಾಸ್ತ್ರ ನಿರ್ಬಂಧಗಳಿಲ್ಲದೆ ಆದಿಯಿಂದಲೂ ವಿವಿಧ ಮಜಲುಗಳಲ್ಲಿ ಬೆಳೆಯುತ್ತಾ ಬಂದಿರುವ ಜನಪದ ಸಂಗೀತ 'ದನಿ –ಬನಿಗಳಿಂದ, ನಡೆ–ನುಡಿಗಳಿಂದ ಮತ್ತು ಗತ್ತು–ಗೈರತ್ತುಗಳಿಂದ ಆಕರ್ಷಿಸುವ, ಪ್ರಕೃತಿಯ ಮಡಿಲಲ್ಲಿ ಹುಟ್ಟಿ, ದಿನ ನಿತ್ಯ ಕಾಯಕದಲ್ಲಿ ಬೆಳೆದು, ಮುಗ್ಧ ಹಳ್ಳಿಗರ ಬಾಯಲ್ಲಿ ಫಲವಾದುದು. ಇಂತಹ

ಜನಪದ ಸಂಗೀತ ತನ್ನದೇ ಆದ ಲಕ್ಷಣಗಳನ್ನು ಹೊಂದಿದೆ. ಅಂತಹ ಲಕ್ಷಣಗಳನ್ನು ಜನಪದ ತಜ್ಞ ಹೆಚ್.ಎಲ್. ನಾಗೇಗೌಡ ಅವರು ಹೀಗೆ ಗುರುತಿಸಿದ್ದಾರೆ. "ಜನಪದ ಸಂಗೀತದಲ್ಲಿ ಆಡು ನುಡಿಯೇ ಪ್ರಧಾನವಾಗಿದ್ದು ತನ್ನದೇ ಆದ ಹತ್ತಾರು ದನಿ–ದಾಟಿಗಳನ್ನು ಕಾಣಬಹುದು. ಇದಕ್ಕೆ ಶಿಷ್ಟ ಸಂಗೀತದಂತೆ ಯಾವುದೇ ಕಟ್ಟುಪಾಡುಗಳಿಲ್ಲ. ಆದರೂ ದನಿ–ದಾಟಿ–ಮಟ್ಟುಗಳ ಬಗ್ಗೆ ಸ್ಪಷ್ಟ ರೂಪವಿದ್ದು ಅವುಗಳನ್ನು ಹಾಡಬೇಕಾದ ಸಂದರ್ಭಗಳ ಬಗ್ಗೆಯೂ ನಿಕರವಾದ ಮಾಹಿತಿ ಇರುತ್ತದೆ. ಜನಪದ ಸಂಗೀತದಲ್ಲಿ 'ಲಯ'ವೂ ಪ್ರಧಾನವಾಗಿದ್ದು ವಿಶೇಷವಾಗಿ ತ್ರಿಪದಿ ಸಾಹಿತ್ಯವನ್ನು ಹಾಡುವಾಗ ಮಹಿಳೆಯರು ಇದನ್ನು ತೋರ್ಪಡಿಸುತ್ತಾರೆ. ಲಯ ಪ್ರಧಾನವಾದ ಸಂಗೀತವೆಂದರೆ ವಾದ್ಯರಹಿತ ಸಂಗೀತವೆಂದೇ ಅರ್ಥ. ಹಿಮ್ಮೇಳ–ಮುಮ್ಮೇಳನದ ಕಲ್ಪನೆ ಜನಪದ ಸಂಗೀತದ ಅನನ್ಯ ಲಕ್ಷಣ. ಇದು ಹಾಡುಗಾರರಿಗೆ ಸಹಾಯಕವಾಗಿ ಒದಗಿ ಬರುವ ಸಂಗತಿಯಾಗಿದೆ".

ಇಂಥ ಜನಪದ ಸಂಗೀತದ ಬಗ್ಗೆ ಸರಿಯಾದ ಕಲ್ಪನೆಯಿಲ್ಲದೆ ಇಂದು ಆಧುನಿಕ ಪಾಪ್ ಸಂಗೀತ ಮಾದರಿಗಳನ್ನೆ ಆದರ್ಶಗಳೆಂಬಂತೆ ಭಾವಿಸಿದ್ದೇವೆ. ಈ ಶಿಷ್ಟ ಸಂಗೀತ ಎಷ್ಟರ ಮಟ್ಟಿಗೆ ಜನರ ಮನದಲ್ಲಿ ಬೇರೂರಿತೆಂದರೆ ಪಾರಂಪರಿಕವಾಗಿ ಉಳಿದು ಬಂದಿದ್ದ ಜನಪದ ಸಂಗೀತ ಹಿನ್ನೆಲೆಗೆ ಸರಿದು ತನ್ನ ಅಸ್ತಿತ್ವ ಕಳೆದುಕೊಳ್ಳುವ ಸ್ಥಿತಿಗೆ ತಲುಪಿತು. ಇಂದಿಗೂ ಆ ಸ್ಥಿತಿಯೇ ಮುಂದುವರೆದಿದೆ. ಇಂಥ ಸ್ಥಿತಿಯಿಂದ ಬಿಡುಗಡೆ ಪಡೆಯಬೇಕಾಗಿದ್ದು ಜನಪದ ಸಂಗೀತದ ನೆಲೆಗಳನ್ನು ಸರಿಯಾಗಿ ಅರ್ಥೈಯಿಸಿಕೊಂಡು ಅದನ್ನು ಪುನರುಜ್ಜೀವನಗೊಳಿಸಬೇಕಿದೆ.

ಚಿತ್ರ ಕಲೆ

ಜನಪದ ಚಿತ್ರಕಲೆ ಜಾನಪದ ಕಲಾಪ್ರಕಾರಗಳಲ್ಲೇ ಗಮನ ಸೆಳೆಯುವ ಕಲೆ. ಮಣ್ಣಿಗೆ ಹತ್ತಿರವಾಗಿ ಗ್ರಾಮ ಜೀವನ ನಡೆಸುವ ಜನಪದರು ಪ್ರಕೃತಿಗೆ ನಿಷ್ಠವಾಗಿ ಬದುಕುವುದಾಗಿ ಅವರ ಚಿತ್ರ ಕಲೆ ಸಹಜವಾಗಿ ಪ್ರಕೃತಿಯನ್ನು ಅವಲಂಬಿಸಿದೆ. ಜನಪದರು ತಮ್ಮ ಮನಗಳ ಮೋರಿ ಮೇಲೆ, ಕೃಷಿ ಉಪಕರಣಗಳ ಮೇಲೆ, ಪ್ರಾಣಿಯ ದೇಹದ ಮೇಲೆ, ಮನುಷ್ಯನ ದೇಹದ ಮೇಲೆ, ಮನೆಯ ಮುಂದಿನ ಅಂಗಳದಲ್ಲಿ ಮೇಲೆ ಚಿತ್ರಕಲೆಯನ್ನು ಬಿಡಿಸುತ್ತಾರೆ. ಈ ಚಿತ್ರಕಲೆಯ ಹಿನ್ನೆಲೆಯಾಗಿ ಸಮೃದ್ಧವಾದ ನಂಬಿಕೆ–ಆಲೋಚನೆಗಳು ಇವೆ. ಗೋಡೆಗಳ ಮೇಲೆ ಬಿಡಿಸಲಾಗುವ ಅನೇಕ ರೀತಿಯ ಪ್ರಾಣಿ–ಪಕ್ಷಿಗಳ ಚಿತ್ರಗಳು, ನೆಲದ ಮೇಲೆ ಬಿಡಿಸುವ ರಂಗೋಲಿ, ತೊಡುವ ವಸ್ತುಗಳಲ್ಲಿ ಬಿಡಿಸುವ ಕಸೂತಿ, ಮನುಷ್ಯರ ದೇಹದ ಮೇಲೆ ಚುಚ್ಚುವ ಹಚ್ಚೆ, ಧಾರ್ಮಿಕ ಆಚರಣೆಗಳಲ್ಲಿ ನಡೆಯುವ ಕುಣಿತಗಳಲ್ಲಿ ಬಳಸುವ ಮುಖವಾಡಗಳ ಚಿತ್ತಾರಗಳು. ಬಯಲಾಟ–ಯಕ್ಷಗಾನದ ಮುಖವರ್ಣನೆಗಳು, ಕೃಷಿ ಇನ್ನು ಮೊದಲಾದ ವೃತ್ತಿಗಳಲ್ಲಿ ಬಳಸುವ ಪರಿಕರಗಳ ಮೇಲೆ ಚಿತ್ರಿಸುವ ಚಿತ್ರಗಳು ಮೊದಲಾದವು ಜನಪದ ಚಿತ್ರ ಕಲೆಯ ಮಾದರಿಗಳಾಗಿವೆ. ಈ ಮಾದರಿಗಳಲ್ಲಿ ಕೇವಲ ಬಣ್ಣ ಬಳಿಯುವ ಕ್ರಿಯೆ ಮಾತ್ರ ಇಲ್ಲ ಬದಲಿಗೆ ಇವುಗಳ ಹಿಂದೆ ಅಪಾರವಾದ ಲೋಕಜ್ಞಾನವಿದೆ. ಇಂಥ ಲೋಕಜ್ಞಾನ ವಿರುವ ಜನಪದ ಚಿತ್ರಕಲೆಯನ್ನು ಆಧುನಿಕ ಚಿತ್ರ ಕಲೆ ಬಂದ ತಕ್ಷಣ ನಮ್ಮ ಸಮಾಜ ಮರೆತುಬಿಟ್ಟಿತು. ಅಷ್ಟೇ ಅಲ್ಲ ಆಧುನಿಕ ಶಿಷ್ಟ ಶಾಖೆಯ ಚಿತ್ರಕಲೆಯನ್ನು ಹೊತ್ತು ಮೆರೆಸಿತು. ಇದೊಂದು ಅಪಾಯಕಾರಿ ಬೆಳವಣಿಗೆ ಜನಪದ ಚಿತ್ರಕಲೆಯನ್ನು ಮರೆತರೆ ತೊಂದರೆಯಿಲ್ಲ ಎಂದು ಹೇಳಬಹುದು ಆದರೆ ಆ ಕಲೆಯ ಹಿಂದಿನ ಜ್ಞಾನ ಮರೆಯಾಯಿತಲ್ಲ ಅದು ಸರಿಯಲ್ಲ. ಈ ಹಿನ್ನೆಲೆಯಲ್ಲಿ ಜನಪದ ಚಿತ್ರಕಲೆಗೆ ಮರು ಜೀವ ನೀಡಬೇಕಿದೆ.

ವಾಸ್ತು

ಶಿಷ್ಟ ಪರಂಪರೆಯಲ್ಲಿ ವಾಸ್ತು ಶಾಸ್ತ್ರ ಅತ್ಯಂತ ಮಹತ್ವದ್ದು. ಈ ಬಗ್ಗೆ ಸುದೀರ್ಘ ಅಧ್ಯಯನಗಳು ನಡೆದಿವೆ. ಇಂಥ ವಾಸ್ತು ಸಂಗತಿಗಳನ್ನು ಆಧರಿಸಿ ಸಾಕಷ್ಟು ನಿರ್ಮಾಣಗಳು ನಡೆದಿವೆ. ಈ ಪರಂಪರೆಯಲ್ಲಿರುವಂತೆ ನಮ್ಮ ಜನಪದ

ಪರಂಪರೆಯೊಳಗೂ ಒಂದು ವಾಸ್ತು ಶಾಸ್ತ್ರವಿದೆ. ಆದರೆ ಈ ರೂಪದಲ್ಲಲ್ಲ. 'ಶಿಷ್ಯ ಪರಂಪರೆಯ ವಾಸ್ತು ಶಾಸ್ತ್ರವು ಅರಮನೆಗಳ ರಚನೆ, ದೇವಾಲಯಗಳ ರಚನೆ, ಹಾಗೂ ಕೋಟೆಗಳ ರಚನೆಯನ್ನು ವಾಸ್ತು ಶಾಸ್ತ್ರವು ಅಭ್ಯಾಸ ಮಾಡುತ್ತದೆ. ಇದಕ್ಕಿಂತ ಭಿನ್ನವಾಗಿ ಜನಪದ ವಾಸ್ತುವು ಜನಪದರ ಮನೆ, ಕೊಟ್ಟಿಗೆ, ಅಂಗಳ, ಬಾವಿ, ಗುಡಿ ಹಳ್ಳಿ ಮತ್ತಿತ್ತರ ವಿಷಯಗಳನ್ನು ತನ್ನ ವ್ಯಾಪ್ತಿಗೆ ಸೇರಿಸಿಕೊಳ್ಳುತ್ತದೆ.

ಈ ಭಾಗದಲ್ಲಿ ನಾವು ಗಮನಿಸಬೇಕಾದ ಸಂಗತಿಗಳೆಂದರೆ ದೇವರ ಗುಡಿ ಮತ್ತು ಮನುಷ್ಯರ ವಾಸದ ಮನೆಗಳ ರಚನೆ ಜನಪದರ ದೇವರ ಗುಡಿಗಳು ಸುತ್ತು ಗುಡಿಸಲುಗಳೇ ಆಗಿರುತ್ತವೆ. ಕಾಡಲ್ಲಿ ಸಿಗುವ ಗಳ ಮತ್ತು ಹುಲ್ಲನ್ನು ಬಳಸಿ ಗುಡಿಸಲು ನಿರ್ಮಿಸುವುದು. ಅದಕ್ಕೊಂದು ಚಿಕ್ಕ ಬಾಗಿಲಿಡುವುದು. ಹಾಗೆಯೇ ಮನುಷ್ಯನ ಮನೆಗಳ ರಚನೆ ಕೂಡ ವಿಶಿಷ್ಟವಾಗಿದ್ದು ಕಾಡಿನ ಪರಿಕರಗಳಿಂದಲೇ ಇವುಗಳು  ಕೂಡ ರಚನೆಯಾಗುತ್ತಿದ್ದವು. ಇವುಗಳಲ್ಲಿ ದೇವರ ಗುಡಿಯ ಬಾಗಿಲು ಅತೀ ಚಿಕ್ಕದಾಗಿರುತ್ತದೆ. ಇದಕ್ಕೆ ಜನಪದರ ನಂಬಿಕೆ ಪ್ರಧಾನ ಕಾರಣವಾಗಿದೆ. ದೇವರ ಗುಡಿಯ ಒಳಗೆ ಹೋಗಬೇಕಾದರೆ ಮನುಷ್ಯ ತಲೆ ಭಾಗಿ ಹೋಗಬೇಕೆಂಬ ವಿಧೇಯತೆಯ ಸಂಕೇತವಾಗಿ ಕಾಣುತ್ತದೆ. ಅಂದರೆ ವಾಸ್ತು ರಚನೆಯೂ ಕೂಡ ಮಾನವೀಯ ಮೌಲ್ಯಗಳನ್ನು ಬಿಂಬಿಸುವಂತಹದ್ದು ವಾಸದ ಮನೆಯ ಒಳರಚನೆಗಳ ರೂಪವನ್ನು ಕೂಡ ಇಲ್ಲಿ ಗಮನಿಸಬೇಕಾಗುತ್ತದೆ. ಮನೆಯ ಹಿತ್ತಲು–ಜಗಲಿ–ಅಡುಗೆ ಮನೆಯ ಸಂರಚನೆ ಕೂಡ ಸಮುದಾಯದ ಮೌಲ್ಯಗಳನ್ನು ಒಳಗೊಂಡಿದೆ.

ಉಡುಗೆ–ತೊಡುಗೆ

ಜನಪದ ಸಂಸ್ಕೃತಿಯಲ್ಲಿ ಕುತೂಹಲ ಮೂಡಿಸುವ ಸಂಗತಿಗಳಲ್ಲಿ ಅವರು ತೊಡುವ ಉಡುಗೆ–ತೊಡುಗೆಗಳೂ ಕೂಡ ಪ್ರಮುಖವಾದವುಗಳಾಗಿವೆ. ಜನಪದ ಜೀವನದಲ್ಲಿ ಉಡುಪು ಮೊದ ಮೊದಲು ಕೇವಲ ಪ್ರಾಕೃತಿಕ ಅವಶ್ಯಕತೆಯಾಗಿತ್ತು. ಮೈಗೆ ಚಳಿಯಾದಾಗ ಆದಿ ಮಾನವ ಮರದ ತೊಗಟೆಯನ್ನು ಅಥವಾ ಪ್ರಾಣಿಯ ಚರ್ಮಗಳನ್ನು ಅಥವಾ ಮರ ಗಿಡಗಳ ಸೊಪ್ಪನ್ನು ಮೈಗೆ ಸುತ್ತಿಕೊಳ್ಳುತ್ತಿದ್ದ. ಮುಂದುವರೆದು ಸೌಂದರ್ಯದ ಕಲ್ಪನೆ ಬಂದಾಗ ಪ್ರಕೃತಿಯಲ್ಲಿ ಸಿಗುವ ಎಲೆ–ಹೂವು–ಕಾಯಿಗಳನ್ನು ಧರಿಸಿದ್ದಿದೆ. ಇಂಥ ಬದುಕು ಹತ್ತಿ ಮತ್ತು ಬೇರೆ ಬೇರೆ ಲೋಹಗಳ ಬಳಕೆಗೆ ಬಂದ ತಕ್ಷಣ ಇನ್ನೊಂದು ಮಾದರಿಗೆ ಬದಲಾಯಿತು. ಪ್ರಕೃತಿಯಲ್ಲಿ ಸುಲಭವಾಗಿ ದೊರೆಯುವ ಪರಿಕರಗಳಿಂದ ಮಾನ ಮುಚ್ಚಿಕೊಳ್ಳುವ , ಸೌಂದರ್ಯ ಹೆಚ್ಚಿಸಿಕೊಳ್ಳುವ ಸಂದರ್ಭಗಳಿದ್ದಾಗ ಮಾನವ ಬದುಕಿನೊಳಗೆ ಸರಳತೆ, ಸಮಾನತೆ ಮನೆಮಾಡಿತ್ತು. ಆದರೆ ಹತ್ತಿ ಮತ್ತು ಲೋಹಗಳ ಬಳಕೆಯ ಕಾಲಕ್ಕೆ ಸಾಮಾಜಿಕ ಅಸಮಾನತೆ ಕಾಣಿಸಿಕೊಂಡಿರುವುದನ್ನು ಗುರುತಿಸಬಹುದು. ಈ ಅಸಮಾನತೆ ಕಾಲ ನಂತರದಲ್ಲಿ ಅತೀ ಹೆಚ್ಚಿನ ಅಂತರ ಸೃಷ್ಟಿಯಾಗಿದೆ. ಪಾಶ್ಚಾತ್ಯ ವೇಷ ಭೂಷಣಗಳು ನಮ್ಮೊಳಗೆ ಪ್ರವೇಶ ಮಾಡಿದ ತಕ್ಷಣ ಈ ಅಂತರ ಇನ್ನಷ್ಟು ಹೆಚ್ಚಿತು. ಆರ್ಥಿಕ ಶಕ್ತಿ ಇರುವ ಜನ ಧರಿಸುವ ವಸ್ತ್ರ ಹಾಗೂ ಆಭರಣಗಳಿಗೂ ಆರ್ಥಿಕವಾಗಿ ಶಕ್ತಿಹೀನರಾದವರು ಧರಿಸುವ ವಸ್ತ್ರಾಭರಣಗಳಿಗೂ ಸ್ಪಷ್ಟವಾದ ವ್ಯತ್ಯಾಸ ಕಂಡುಬರುತ್ತದೆ. ಅಂದರೆ ಆದಿಮಾನವನ ಪರಿಸರದಲ್ಲಿ ಯಾವುದೇ ಅಂತರವನ್ನು ಕಾಣಲಾಗುವುದಿಲ್ಲ. ಈ ಅಂತರಗಳು ಜಾಸ್ತಿಯಾಗಿ ಪಾಶ್ಚಾತ್ಯ ಸಂಸ್ಕೃತಿಯ ಉಡುಗೆ–ತೊಡುಗೆಗಳು ಜನರ ಮನಸ್ಸನ್ನು ಆಕರ್ಷಿಸಿ ಪಾರಂಪರಿಕ ವೇಷ–ಭೂಷಣಗಳ ಬಗ್ಗೆ ಕೀಳರಿಮೆಯ ಮನೋಭಾವನೆಯನ್ನುಂಟುಮಾಡಿತು. ಇಂದಿನ ಜನ ಪಂಚೆಗಿಂತ ಪ್ಯಾಂಟ್, ಸೀರೆಗಿಂತ ಚೂಡಿ ಅತ್ಯಂತ ಇಷ್ಟ ಪಡುತ್ತಿರುವುದನ್ನು ಕಾಣುತ್ತಿದ್ದೇವೆ. ಬರೀ ಇಷ್ಟೇ ಆಗಿದ್ದರೆ ದೊಡ್ಡ ಸಮಸ್ಯೆ ಇರಲಿಲ್ಲ ಆದರೆ ಇಷ್ಟು ಮಾತ್ರವಲ್ಲದೆ ಪಂಚೆ ಹಾಗೂ ಸೀರೆ ಧರಿಸುವವರನ್ನು ಅವಮಾನಕ್ಕೆಳಗುಮಾಡುವ ಹಿಯ್ಯಾಳಿಸುವ ಪ್ರಸಂಗಗಳು ನಡೆಯುತ್ತಲೇ ಇರುತ್ತವೆ. ಇಲ್ಲಿ ಗಮನಿಸಬೇಕಾಗಿರುವ ಸಂಗತಿ ಎಂದರೆ ಪಾರಂಪರಿಕ ಉಡುಗೆ–ತೊಡುಗೆಗಳು ಸಂಪೂರ್ಣ

ಮಾಯವಾಗಿದೆ ಎಂದು ನಂಬಬೇಕಿಲ್ಲ. ಇಂದಿಗೂ ಇನ್ನಡ ಸಮುದಾಯಗಳಲ್ಲಿ ಅನೇಕ ಕಡೆ ಪಾರಂಪರಿಕ ಉಡುಗೆ ತೊಡುಗೆಗಳ ಬಳಕೆಯಲ್ಲಿರುವುದನ್ನು ನೋಡಬಹುದು. ಕೆಲವರಲ್ಲಿ ಸಾಮಾನ್ಯ ಬದುಕಿನ ನಡೆಯಲ್ಲಿ ಬಳಕೆಯಲ್ಲಿದ್ದರೆ, ಇನ್ನೂ ಕೆಲವು ಕಡೆ ಸಾಂಪ್ರದಾಯಿಕ ಆಚರಣೆಗಳಲ್ಲಿ ಕಂಡುಬರುತ್ತಿದೆ. ಇಂಥಲ್ಲೆಲ್ಲ ಬಳಕೆಗೊಳ್ಳುವ ಉಡುಗೆ ತೊಡುಗೆಗಳು ಕೇವಲ ಸಂಪ್ರದಾಯಗಳಾಗಿವೆ. ಹಾಗಾಗಿ ಇವು ಸಂಪ್ರದಾಯಗಳಾಚೆಗಿನ ನಿಜಬದುಕಿನ ಪ್ರಯೋಗಗಳಾಗಬೇಕಿದೆ.

ಇಲ್ಲಿಯವರೆಗೂ ಕನ್ನಡ ಜನಪದ ಸಂಸ್ಕೃತಿಯ ಆಳವಾದ ಬದುಕಿನಲ್ಲಿರುವ ಕೆಲವೇ ಕೆಲವು ಆದರ್ಶ ತುಣುಕುಗಳನ್ನು ಆಯ್ದು ಜೋಡಿಸಿ ಕೊಡಲಾಯಿತು. ಈ ಬರಹದ ಆರಂಭದಲ್ಲೇ ಸ್ಪಷ್ಟಪಡಿಸಿದಂತೆ ನಮ್ಮ ಮೌಲ್ಯಯುತ ಸಮಾಜ ಪರರ ಸಂಸ್ಕೃತಿಯಿಂದ ಹುಟ್ಟಿದ ಮೌಲ್ಯಗಳ ಬೆನ್ನು ಹತ್ತಿದ್ದರ ಪರಿಣಾಮ ಅನೇಕ ಸಮಸ್ಯೆಗಳನ್ನು ಎದುರಿಸುವಂತಾಯಿತು. ಇದಕ್ಕೆ ಪರಿಹಾರವೆಂದರೆ ನಮ್ಮ ಸಂಸ್ಕೃತಿಯ ಬೇರುಗಳನ್ನು ಗುರುತಿಸಿ ಗಟ್ಟಿಗೊಳಿಸುವುದು. ಈ ಹಿನ್ನೆಲೆಯಲ್ಲಿ ರೂಪುಗೊಂಡಿರುವ ಪ್ರಸ್ತುತ ಬರಹದಲ್ಲಿ ಕನ್ನಡ ಜನಪದ ಸಂಸ್ಕೃತಿಯೊಳಗಿನ ಸಕಾರಾತ್ಮಕ ಮೌಲ್ಯಗಳನ್ನು ಗುರುತಿಸುವ ಪ್ರಯತ್ನವಿದೆ. ಇಲ್ಲಿನ ವಿವರಗಳನ್ನು ಓದಿದ ಯಾರಿಗಾದರೂ ಒಂದು ಪ್ರಶ್ನೆ ಅಥವಾ ಅನುಮಾನ ಎದುರಿಗೆ ನಿಲ್ಲುತ್ತದೆ. ಅದೇನೆಂದರೆ ಕನ್ನಡ ಜನಪದ ಸಂಸ್ಕೃತಿಯಲ್ಲಿ ಬರೀ ಗುಣಗಳು ಮಾತ್ರ ಇವೆಯೇ? ದೋಷಗಳಿಲ್ಲವೆ? ಈ ಪ್ರಶ್ನೆಗೆ ಉತ್ತರ ಸುಲಭ ಎಲ್ಲಾ ಸಂಸ್ಕೃತಿಗಳಲ್ಲಿರುವಂತೆ ಇಲ್ಲಿಯೂ ಕೂಡ ಗುಣಗಳಿವೆ ಅಂತೆಯೇ ಅವಗುಣಗಳೂ ಇವೆ. ಆದ್ದರಿಂದ ಅಂಥ ಕೆಲವು ಅವಗುಣಗಳನ್ನು ಗಮನಿಸುವುದು ಸೂಕ್ತ. ಏಕೆಂದರೆ ಕನ್ನಡ ಜನಪದ ಸಂಸ್ಕೃತಿಯ ಅವಗುಣಗಳನ್ನು ತಿಳಿಯದೆ ಮುಂದೆ ನಡೆದರೆ ಅವಲೋಕನ ಪರಿಪೂರ್ಣವಾಗಲಾರದು.

ಮಿತಿಗಳು

ಕನ್ನಡ ಜನಪದ ಸಂಸ್ಕೃತಿಯು ತನ್ನ ಆರಂಭಿಕ ದಿನಗಳಲ್ಲಿ ಅತ್ಯಂತ ಉದಾರ–ಮಾನವೀಯ ನೆಲೆಯಲ್ಲಿ ಸಂಬಂಧಗಳನ್ನು ರೂಪಿಸಿಕೊಂಡಿದ್ದು, ಸರ್ವ ಸಮಾನತೆಯ ಸಮಾಜವನ್ನು ನಿರ್ಮಾಣ ಮಾಡಿಕೊಂಡಿತ್ತು. ಆದರೆ ಈ ಸ್ಥಿತಿ ಕಾಲದ ಬದಲಾವಣೆಯಲ್ಲಿ ಸಿಕ್ಕು ಸಾಕಷ್ಟು ಪರಿವರ್ತನೆಗೊಂಡು ತನ್ನ ಮೂಲ ಸ್ಥಿತಿಯನ್ನು ಕಳೆದುಕೊಳ್ಳುತ್ತಾ ಬಂದಿದೆ. ಹೀಗೆ ಕನ್ನಡ ಜನಪದ ಸಂಸ್ಕೃತಿಯ ಚರಿತ್ರೆ ಒಂದು ಹಂತದವರೆಗೆ ತನ್ನ ನಂಬಿಕೆ ಮೌಲ್ಯಗಳ ಉನ್ನತೀಕರಣಕ್ಕೆ ಕಾರಣವಾಗಿದ್ದರೆ. ಅಲ್ಲಿಂದ ಮುಂದೆ ಅವೆಲ್ಲವುಗಳನ್ನು ಕಳೆದುಕೊಂಡಿದ್ದು ಸತ್ಯ. ಈ ಹಿನ್ನೆಲೆಯೊಳಗೆ ಜನಪದ ಸಂಸ್ಕೃತಿಯನ್ನು ಗಮನಿಸಿದರೆ ನಾವು ಇಲ್ಲಿಯವರೆಗೂ ಹೇಳುತ್ತಾ ಬಂದ ಗುಣಗಳಿಗೆ ವಿರುದ್ಧವಾದ ಅಂಶಗಳು ಹಲವಾರು ಇವೆ. ಅವುಗಳಲ್ಲಿ ಕೆಲವನ್ನು ಹೀಗೆ ಪಟ್ಟಿ ಮಾಡಬಹುದು.

- ಜನಪದ ಸಂಸ್ಕೃತಿಯಲ್ಲಿ ಹೆಣ್ಣಿಗೆ ವಿಶೇಷ ಗೌರವ–ಸ್ಥಾನಮಾನಗಳಿವೆ ಎಂಬ ವಾದಕ್ಕೆ –ಖಂಡಕಾವ್ಯಗಳಲ್ಲಿ, ಮಹಾಕಾವ್ಯಗಳಲ್ಲಿ, ಕಥೆಗಳಲ್ಲಿ ದೊರೆಯುವ ಅನೇಕ ಸ್ತ್ರೀ ಪಾತ್ರಗಳು ಅಪವಾದವಾಗಿ ನಮ್ಮೆದರು ನಿಲ್ಲುತ್ತವೆ. ದೋಷಪೂರಿತ ಸಮಾಜದ ಲಿಂಗಬೇಧ ನೀತಿ ಇಲ್ಲಿಯೂ ಕೆಲಸ ಮಾಡಿದೆ.
- ಪ್ರಸ್ತುತ ಪರಂಪರೆಯಲ್ಲಿ ಬಳಕೆಗೆ ಬಂದಿರುವ ನಂಬಿಕೆ ಸಂಪ್ರದಾಯ–ಆಚರಣೆಗಳೆಲ್ಲವೂ ಅರ್ಥಪೂರ್ಣವೆಂದು ಹೇಳುವಂತಿಲ್ಲ. ಅನೇಕ ಸಲ ಇವೆಲ್ಲವೂ ಮೇಲ್ವರ್ಗದ ಹಿತಾಸಕ್ತಿಯನ್ನು ಕಾಪಾಡುವ ಅಸ್ತ್ರಗಳಂತೆಯೂ ಬಳಕೆಯಾಗಿವೆ. ಇದಕ್ಕೆ ಬಸವಿ ಬಿಡುವ ಪದ್ಧತಿ, ಮಾರಿಯ ಆಚರಣೆಗಳು ಅತ್ಯುತ್ತಮ ಉದಾಹರಣೆಗಳು.
- ಸಮಷ್ಟಿ ಹಿತ ಜನಪದ ಸಂಸ್ಕೃತಿಯ ಜೀವಾಳ ಎಂದು ಹೇಳುತ್ತಿರುವಾಗಲೆ ಪಕ್ಕದಲ್ಲಿಯೇ ಸ್ವಾರ್ಥಪರವಾದ ಅನೇಕ ವ್ಯಕ್ತಿ ವಿಷಯಗಳು ಪಕ್ಕದಲ್ಲಿಯೇ ನಿಂತು ಅಣಕಿಸುತ್ತವೆ ಜನಪದ ವೈದ್ಯ ಪದ್ಧತಿಯಲ್ಲಿ ಇರುವ ಜ್ಞಾನವನ್ನು ಯಾರಿಗೂ ಬಹಿರಂಗ ಮಾಡಬಾರದೆಂಬ ನಂಬಿಕೆಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

- ಶ್ರಮಾಧಾರಿತ ಬದುಕಿನ ಬಯಕೆ ಇವರಲ್ಲಿದೆ ಎಂದರೂ ಕೂಡ ದುಡಿಮೆಯಿಲ್ಲದೇ ಸುಖಪಡುವ ಮನಸ್ಸು ಇವರಲ್ಲಿ ಇಲ್ಲದೇ ಇಲ್ಲ.
- ಸಂಪತ್ತಿನ ನಿರಾಕರಣೆ ಜನಪದ ಸಂಸ್ಕೃತಿಯ ಬಹುಮುಖ್ಯ ಗುಣ ಎಂಬುದಾಗಿ ಹೇಳುವ ಮಾತಿಗೆ ವಿರೋಧವೆಂಬಂತೆ ಸಂಪತ್ತು ಬೇಕೆನ್ನುವ ಹಲವಾರು ಪ್ರಸಂಗಗಳು ಜನಪದ ಸಾಹಿತ್ಯ ಮತ್ತು ಸಂಸ್ಕೃತಿಯಲ್ಲಿ ದೊರೆಯುತ್ತವೆ.
- ಜನಪದ ಸಮಾಜದೊಳಗಿನ ಸಂಸಾರದಲ್ಲಿ ಅತ್ಯಂತ ಮಧುರ ಬಾಂಧವ್ಯಗಳಿವೆ. ಆದರೂ ಅನೇಕ ಕಡೆ ಈ ಬಂಧುತ್ವ ಸಡಿಲಗೊಂಡಿರುವುದನ್ನು ಗುರುತಿಸಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಪೂರಕವಾಗಿ ಅನೇಕ ಆಧಾರಗಳು ಲಭ್ಯವಿದೆ. ಆದರೆ ಆ ಬಗ್ಗೆ ಹೆಚ್ಚಿನ ವಿವರಗಳಿಗೆ ಹೋಗುವುದು ಈ ಬರಹದ ಉದ್ದೇಶವಲ್ಲ. ಹಾಗಾಗಿ ಕೆಲವೇ ಕೆಲವು ಅಂಶಗಳ ಪಟ್ಟಿಮಾಡಲಾಯಿತು. ಈ ಸಂದರ್ಭದಲ್ಲಿ ನಾವು ಸ್ಪಷ್ಟಪಡಿಸಿಕೊಳ್ಳಬೇಕಾದ ಸಂಗತಿ ಎಂದರೆ ಆರಂಭಕ್ಕೆ ಸರ್ವೋದಯದ ತಳಹದಿಯ ಮೇಲೆ ನಿಂತಿದ್ದ ಜನಪದ ಸಮಾಜ ಬರುಬರುತ್ತಾ ಮನವ ವಿರೋಧಿ ಮೌಲ್ಯಗಳನ್ನು ಒಳಗೊಳ್ಳುತ್ತಾ ಬಂದಿರುವುದು ಸರಿಯಷ್ಟೇ. ಹಾಗೆಂದು ಇಡೀ ಸಂಸ್ಕೃತಿಯೇ ತಿರಸ್ಕಾರ ಯೋಗ್ಯ ಎಂದು ನಾವ್ಯಾರು ಭಾವಿಸಲಿಕ್ಕಾಗದು. ಆದ್ದರಿಂದಲೇ ಆಧುನಿಕ ಸಮಾಜದ ಅವಘಡಗಳಿಂದ ಪಾರಾಗಲು ಪರ್ಯಾಯಗಳನ್ನು ಹುಡುಕುತ್ತಿರುವಾಗ ನಮಗೆ ಎದ್ದು ಕಾಣುವ ದಾರಿ ಇದೇ ಜನಪದ ಸಂಸ್ಕೃತಿಯದು. ಇಂಥ ಸಾಧ್ಯತೆಗಳನ್ನು ಕುರಿತು ಆಲೋಚಿಸುವಾಗ ಪಾರಂಪರಿಕ ಜನಪದ ಸಂಸ್ಕೃತಿಯನ್ನು ಮರು ಶೋಧಿಸಿ ಅದನ್ನು ನಮ್ಮ ಮುಂದಿನ ಬದುಕಿಗೆ ಅಳವಡಿಸಿಕೊಳ್ಳುವಾಗ ಅದರೊಳಗೆ ಯಾವುದು ಅನುಸರಣಾಯೋಗ್ಯ ಎಂಬುದನ್ನು ಮನಗಂಡು ಆಯ್ದು ಕಟ್ಟಬೇಕಾಗುತ್ತದೆ.

**ಸಮಾರೋಪ**

ಕನ್ನಡ ಜನಪದ ಸಂಸ್ಕೃತಿ ಅತ್ಯಂತ ಪ್ರಾಚೀನವಾದ ಪರಂಪರೆಯನ್ನು ಹೊಂದಿದ್ದು ಮಹತ್ವದ ಮಾನವೀಯ ಮೌಲ್ಯಗಳನ್ನು ಹೊತ್ತು ತಂದಿದೆ. ದೀರ್ಘಕಾಲದ ನಡೆಯಲ್ಲಿ ಬದಲಾಗುತ್ತಾ ಬಂದ ಈ ಸಂಸ್ಕೃತಿಯ ಒಡಲಲ್ಲಿ ಒಳ್ಳೆಯದರ ಜೊತೆ ಕೆಟ್ಟದ್ದು ಸೇರಿ ಬಿಟ್ಟಿದೆ. ಆದರೂ ಅದನ್ನು ಸಂಪೂರ್ಣ ನಿರ್ಲಕ್ಷಿಸಿ ಮುನ್ನಡೆಯುವಂತಿಲ್ಲ. ಆಧುನಿಕತೆಯ ಬದಲಾದ ಈ ಕಾಲಮಾನದಲ್ಲಿ ಮನುಷ್ಯ ಸಮಾಜ ನಿಜವಾಗಿ ಹೊಂದಿರಲೇ ಬೇಕಾದ ಮೌಲ್ಯಗಳು ಕಾಣದಂತಾಗಿವೆ. ಮಾನವೀಯ ಸಂಬಂಧಗಳು ವ್ಯವಹಾರಿಕವಾಗಿವೆ. ಇಂಥ ಸಂದರ್ಭದೊಳಗೆ ರೋಗಗ್ರಸ್ಥ ಈ ಸಮಾಜವನ್ನು ಗುಣಪಡಿಸುವುದು ಹೇಗೆ ಎಂದು ಚಿಂತಿಸುವವರಿಗೆಲ್ಲ ದೊರೆಯಬಹುದಾದ ಪರಿಹಾರೋಪಾಯಗಳೆಂದರೆ ನಮ್ಮ ಪಾರಂಪರಿಕ ಸಮಾಜದ ಮೌಲ್ಯಗಳ ಪುನರುತ್ಥಾನ. ಇದಕ್ಕಿರುವ ಪ್ರಮುಖ ಆಕರಗಳು ಜಾನಪದ ಬದುಕು ಮತ್ತು ವಿವಿಧ ಸೃಜನಶೀಲ ಅಭಿವ್ಯಕ್ತಿಗಳು. ಈ ಉದ್ದೇಶದಿಂದಲೇ ಜಾನಪದವನ್ನು ಸಮಕಾಲೀನ ಸಮಾಜಕ್ಕೆ ಅನ್ವಯಿಸಿಕೊಳ್ಳುವಾಗ ಗಮನಿಸಬೇಕಾದ ಹಲವಾರು ಮಹತ್ವದ ಸಂಗತಿಗಳ ಬಗ್ಗೆ ಪ್ರಸ್ತುತ ಬರಹದಲ್ಲಿ ಗಮನಸೆಳೆಯಲಾಯಿತು. ಜೊತೆಗೆ ಅವುಗಳನ್ನು ಅಳವಡಿಸಿಕೊಳ್ಳುವಾಗ ಉತ್ತಮ ಮೌಲ್ಯಗಳ ಜೊತೆ ಕೇಡಿನ ಮೌಲ್ಯಗಳೂ ಇರುತ್ತವೆ. ಹಾಗಾಗಿ ಆಯ್ದು ಕಟ್ಟುವಾಗ ತುಂಬಾ ಎಚ್ಚರದಿಂದ ಇರಬೇಕಾಗುತ್ತದೆ. ಜನಪದ ಸಮಾಜದ ಆದಿಮಾ ಮೌಲ್ಯಗಳನ್ನು ಸಮಕಾಲೀನ ಸಮಾಜಕ್ಕೆ ಅಳವಡಿಸಿಕೊಳ್ಳುವುದು ಎಂದರೆ ಆ ಇಡೀ ಸಮಾಜವೊಂದರ ರಚನೆಯನ್ನು ಯಥಾವತ್ತಾಗಿ ಉಳಿಸುವ ವ್ಯರ್ಥ ಪ್ರಯತ್ನವಾಗಬಾರದು. ಹಾಗೇನಾದರೂ ಆದರೆ ಅದು ಜಾನಪದ ಅನ್ವಯಿಕತೆ ಎನಿಸದೆ ಗತ ಸಂಸ್ಕತಿಯ ಗೀಳು ಆಗಿಬಿಡುತ್ತದೆ. ಅಷ್ಟೇ.

**ಪರಾಮರ್ಶನ**


1. ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಎಚ್.ತಿಪ್ಪೇರುದ್ರಸ್ವಾಮಿ, 1997, ಡಿವಿಕೆ ಮೂರ್ತಿ, ಮೈಸೂರು
2. ಕರ್ಣಾಟಕಜಾನಪದ, ಪ್ರ.ಸಂ: ಎಸ್.ಕೆ.ಕರೀಂಖಾನ್,1989,ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ,ಬೆಂಗಳೂರು
3. ಜನಪದ ಮಹಾಕಾವ್ಯಗಳು ಮತ್ತು ಪ್ರತಿಸಂಸ್ಕೃತಿ. ಎಸ್.ಎಂ ಮುತ್ತಯ್ಯ, 2008, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು
4. ಜಾನಪದ ಕೈಪಿಡಿ, ಪ್ರ.ಸಂ: ಹೆಚ್.ಜೆ.ಲಕ್ಕಪ್ಪಗೌಡ, 1997, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು
5. ಜಾನಪದ ಅಧ್ಯಯನ, ದೇ.ಜವರೇಗೌಡ, 2001, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು
6. ಜಾನಪದ:ಸ್ವರೂಪ ಮತ್ತು ಸಾಹಿತ್ಯ.ಸಂ: ಡಿ.ಲಿಂಗಯ್ಯ ಮತ್ತು ಸಂಧ್ಯಾರೆಡ್ಡಿ,1997,ಕನ್ನಡ ಸಾಹಿತ್ಯ ಪರಿಷತ್ತು,ಬೆಂಗಳೂರು
7. ಜಾನಪದ ಆನ್ವಯಿಕತೆ,ಸಂ:ಜಿ.ಆರ್.ತಿಪ್ಪೇಸ್ವಾಮಿ ಮತ್ತು ರಂಗಾರೆಡ್ಡಿ ಕೋಡಿರಾಂಪುರ,2003,ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು
8. ಮಹಿಳಾ ಜಾನಪದ,ಸಂ:ಕೆ.ಆರ್.ಸಂಧ್ಯಾರೆಡ್ಡಿ, 2003, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಬೆಂಗಳೂರು
9. ಸಂಕ್ಷಿಪ್ತ ಕನ್ನಡ ಭಾಷಾ ಚರಿತ್ರೆ, ಎಂ.ಎಚ್.ಕೃಷ್ಣಯ್ಯ, ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು
10. ಸಾಂಸ್ಕೃತಿಕ ಮುಖಾ–ಮುಖಿ, ರಂಗರಾಜ ವನದುರ್ಗ, 2002, ಕನಕ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು
11. ಸಂಸ್ಕೃತಿ ಅಧ್ಯಯನ, ರಹಮತ್ ತರೀಕೆರೆ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು
12. ಜ್ಞಾನ ತುಂಗಾ 2010–11, ವಾರ್ಷಿಕ ಸಂಚಿಕೆ, ಸಹ್ಯಾದ್ರಿ ವಿಜ್ಞಾನ ಕಾಲೇಜು, ಶಿವಮೊಗ್ಗ



ವಿಳಾಸ
ಡಾ. ಎಸ್.ಎಂ. ಮುತ್ತಯ್ಯ
ಸಹಾಯಕ ಪ್ರಾಧ್ಯಾಪಕರು,ಕನ್ನಡ ವಿಭಾಗ
ಸಹ್ಯಾದ್ರಿ ವಿಜ್ಞಾನ ಕಾಲೇಜು (ಸ್ವಾಯತ್ತ)
ಬಿ.ಹೆಚ್. ರಸ್ತೆ,ಶಿವಮೊಗ್ಗ – 577203
ದೂ: 9448640114
ಇ–ಮೇಲ್: smmuthaiah@gmail.com